


# ಸತ್ಯಾರ್ಥ ಪ್ರಕಾಶ

(ವೇದಾದಿ-ವಿವಿಧ-ಸಚ್ಛಾಸ್ತ್ರ-ಪ್ರಮಾಣಗಳಿಂದ ಕೂಡಿದೆ)


ಸತ್ಯಸನಾತನ ವೈದಿಕಧರ್ಮೋದ್ಧಾರಕ

ಪರಮಹಂಸ ಪರಿವ್ರಾಜಕ ಆಚಾರ್ಯ

## ಸ್ವಾಮೀ ದಯಾನಂದ ಸರಸ್ವತೀ

: ಕನ್ನಡಾನುವಾದ :

ಪಂ. ಸುಧಾಕರ ಚತುರ್ವೇದೀ



ಪ್ರಕಾಶಕರು

ಆರ್ಯಸಮಾಜ, ಶ್ರದ್ಧಾನಂದ ಭವನ, ವಿಶ್ವೇಶ್ವರಪುರಂ

ಬೆಂಗಳೂರು - ೫೬೦ ೦೦೪ (ದೂರವಾಣಿ: ೬೫೨೬೩೮೦)

ಪರಿಷ್ಕೃತ ಷಷ್ಠ ಸಂಸ್ಕರಣ

ಇಸವಿ 2003

ಯುಗಾಬ್ದ ೫೧೦೫ ಸ್ವಭಾನು ಸಂ. ಶ್ರಾವಣ. ಬೆಲೆ: ೧೨೦ ರುಪಾಯಿ

SATYARTHA PRAKASHA (Kannada) - A hand book for Religious, Educational, Social, Cultural and Political Revolutionaries.

Written in Hindi by : SWAMI DAYANANDA SARASWATHI
(Founder of Arya Samaj)

Translated by: Pt. SUDHAKAR CHATURVEDI, Bangalore

| | |
|---|---|
| First (Kannada) Edition : | 1909 (1,000 Copies) |
| Second " | 1939 (2000 Copies) |
| Third " | 1955 (4000 Copies) |
| Fourth " | 1974 (5,000 Copies) Arya Samaj Sthapana Shathabdi Edition. |
| (Revised) Fifth " | 1989 (3000 Copies) (Arya Samaj Shraddhanand Bhavan Diamond Jubilee Edition) |
| Sixth Kannada Edition : | 2003 (5000 Copies) |

Pages: xxiii + 497

Published by Arya Samaj, Shraddhananda Bhavan,
Vishveswarapuram, Bangalore - 560 004
Phone: 6526380

Price: Rs. 120/-

Printed by : Veda Bhashya Prakashana Samithi
Shraddhananda Bhavan
V.V.Puram, Bangalore - 560 004
Phone: 660 2914

॥ ಓಂ ॥

## ಪ್ರಕಾಶಕರ ಪ್ರಾಕ್ಕಥನ

ಆದಿತ್ಯಬ್ರಹ್ಮಚಾರೀ, ವೇದಕಾನನವಿಹಾರೀ, ಸಾಕ್ಷಾತ್ಕೃತಧರ್ಮಾದಿವ್ಯದರ್ಶೀ ಮಹರ್ಷಿ ದಯಾನಂದಸರಸ್ವತೀ ಸ್ವಾಮಿಗಳ ಅಮರ ಕೃತಿಯಾದ "ಸತ್ಯಾರ್ಥಪ್ರಕಾಶ"ದ ಕನ್ನಡ ಭಾಷಾನುವಾದದ ಆರನೆಯ ಸಂಸ್ಕರಣವನ್ನು ಕನ್ನಡ ಜನತೆಯ ಕೈಯಲ್ಲಿಡುವ ಈ ಶುಭ ಸಂದರ್ಭದಲ್ಲಿ ಅತ್ಯಂತ ಆವಶ್ಯಕವಾದ ನಾಲ್ಕಾರು ಮಾತುಗಳನ್ನಾಡುವುದು ನಮ್ಮ ಕರ್ತವ್ಯವೇ ಆಗಿದೆ.

"ಸತ್ಯಾರ್ಥಪ್ರಕಾಶ ಗ್ರಂಥ" ರಚನೆಯ ನ್ಯಾಯಸಂಗತವಾದ ಆವಶ್ಯಕತೆಯನ್ನು, ಅನಿವಾರ್ಯತೆಯನ್ನು ಅರಿತುಕೊಳ್ಳಬೇಕಾದರೆ, ಗ್ರಂಥ-ರಚನಾಕಾಲದ ಮತ್ತು ತತ್ಪೂರ್ವನಿರ್ದಿಷ್ಟವಾದ ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ಹಿನ್ನೆಲೆಯನ್ನು ಸಂಶಯಕ್ಕೆಡೆಯಿಲ್ಲದಂತೆ ಗುರುತಿಸುವುದು ಅತ್ಯಾವಶ್ಯಕವೇ ಸರಿ. ಪಾಠಕರಿಗೆ ಇದರ ಪೂರ್ಣಮನವರಿಕೆಯಾದರೆ ಮಾತ್ರ ಸತ್ಯವೆಂಬುದರ ಸತ್ಯವಾದ ಅರ್ಥ ಮನೋಮಂದಿರದಲ್ಲಿ ಪ್ರಕಾಶವಾದೀತು.

### ಸ್ವಾಮೀಜಿಯವರ ಜನ್ಮ-ಪೂರ್ವ ಭಾರತದ ಪರಿಸ್ಥಿತಿ

ಈ ನಮ್ಮ ಪುಣ್ಯಭೂಮಿ ಭಾರತದ ದುರ್ದಿನಗಳು ಆರಂಭವಾದುದು ೫,೦೦೦ ವರ್ಷಗಳ ಮುನ್ನ. ಯೋಗೇಶ್ವರ ಶ್ರೀಕೃಷ್ಣನು ಮಹಾರಾಜಾ ಧೃತರಾಷ್ಟ್ರನ ಆಸ್ಥಾನಕ್ಕೆ ಪಾಂಡವರ ದೂತನಾಗಿ ಬಂದು -

**ಕುರೂಣಾಂ ಪಾಂಡವಾನಾಂ ಚ ಶಮಃ ಸ್ಯಾದಿತಿ ಭಾರತ ।**
**ಅಪ್ರಣಾಶೇನ ವೀರಾಣಾಮಿತಿ ಯಾಚಿತುಮಾಗತಃ ॥**

"ಓ ರಾಜೇಂದ್ರ! ವೀರರಾರೂ ನಾಶಹೊಂದದೆ ಕೌರವ-ಪಾಂಡವರ ನಡುವೆ ಶಾಂತಿಯುದ್ಭವಿಸಲಿ - ಎಂದು ಬೇಡಿಕೊಳ್ಳುವುದಕ್ಕಾಗಿಯೇ ಬಂದಿದ್ದೇನೆ" - ಎಂದು ನಿವೇದಿಸಿಕೊಂಡನು;

**ಸೂಚ್ಯಗ್ರಂ ನೈವದಾಸ್ಯಾಮಿ ವಿನಾಯುದ್ಧೇನ ಕೇಶವ ॥**

"ಯುದ್ಧವಿಲ್ಲದೆ, ಸೂಜಿಯ ಮೊನೆಯೂರಲು ಬೇಕಾದಷ್ಟು ನೆಲವನ್ನೂ ನಾನು ಕೊಡೆನು".-ಎಂದನು ದುರ್ಯೋಧನ. ಬ್ರಹ್ಮಚರ್ಯದ ಅಖಂಡವ್ರತತೊಟ್ಟು, ದೇವವ್ರತನೆಂಬ ಹೆಸರಿಗೆ ಬದಲು 'ಭೀಷ್ಮ' ನೆಂದೇ ಪ್ರಸಿದ್ಧರಾದ, ಪಿತಾಮಹರೂ, ಮತ್ತು "ಇದೋ ನೋಡು. ಈ ಕೈಯಲ್ಲಿ ವೇದವಿದೆ; ಇದರಲ್ಲಿ ಧನುಸ್ಸಿದೆ. ಬ್ರಾಹ್ಮಬಲದಿಂದಲಾದರೂ ಸರಿ; ಕ್ಷಾತ್ರಬಲದಿಂದಲೇ ಆದರೂ ಸರಿ; ಗೆಲುವು ಸಿದ್ಧ".- ಎಂದು ಸಾರಿದ ದ್ರೋಣರೂ ಒಂದೇ ಧ್ವನಿಯಿಂದ

**ಅರ್ಥಸ್ಯ ಪುರುಷೋ ದಾಸೋ ನಾರ್ಥೋದಾಸಶ್ಚಕಸ್ಯಚಿತ್॥**

"ಮಾನವ ಧನದ ದಾಸನು; ಧನ ಯಾವನಿಗೂ ದಾಸನಲ್ಲ"- ಎಂದು ಅಪಸ್ವರವೆಳೆದಾಗ ಆರಂಭವಾಯಿತು ನಮ್ಮ ರಾಷ್ಟ್ರದ ದುರವಸ್ಥೆ. ೧೮ ಅಕ್ಷೌಹಿಣೀ ಸೈನ್ಯ ಹಾಗೂ ಯೋಧಾಗ್ರೇಸರು ಮಾತ್ರವಲ್ಲ; ವೇದವೇದಾಂಗ ಪಾರಂಗತರಾದ ಋಷಿಮುನಿಗಳೂ ನಿರ್ನಾಮರಾದರು. ಸರಿಯಾದ ಧಾರ್ಮಿಕಪಥಪ್ರದರ್ಶಕರು ಇಲ್ಲದಂತಾಗಿ, ವೇದಪ್ರಚಾರ ನಿಂತೇ ಹೋಯಿತು. ೨,೫೦೦ ವರ್ಷಗಳ ಹಿಂದೆ ಗೌತಮಬುದ್ಧ-ಮಹಾವೀರ ತೀರ್ಥಂಕರರು ಬಂದರು. ಅಹಿಂಸಾಗಾನಮಾಡಿ ನಡೆದರು. ಆ ಸಂದರ್ಭದಲ್ಲಿ ಮೂಡಿದ ನಾಸ್ತಿಕ್ಯವನ್ನು ಹುಡಿಗೂಡಿಸಲು ೧,೨೦೦ ವರ್ಷಗಳ ಮುನ್ನ ಆಚಾರ್ಯ ಶಂಕರರು ಬಂದರು. ಅವರ ಅದ್ವೈತವಾದ ರೂಪಗೆಟ್ಟು ಮಾಯಾವಾದ-ವಿವರ್ತವಾದಗಳು ಜನತೆಗೆ ಭ್ರಾಂತಿ ಹುಟ್ಟಿಸಹತ್ತಿದವು. ಆ ಕಾಟವನ್ನು ತಪ್ಪಿಸಲು ೯೦೦ ವರ್ಷ ಮುನ್ನ ಆಚಾರ್ಯ ರಾಮಾನುಜರು ಬಂದರು. ಶೈವಸಂಪ್ರದಾಯಕ್ಕೆ ಪ್ರತಿಯಾಗಿ ವೈಷ್ಣವಮತ ತಲೆಯೆತ್ತಿತು. ಜೀವರ ಹಾಗೂ ಪ್ರಕೃತಿಯ ಭಿನ್ನ ಅಸ್ತಿತ್ವವನ್ನೊಪ್ಪಿಯೂ ಅವೆರಡೂ ಬ್ರಹ್ಮದಲ್ಲಿಯೇ - ವಿಷ್ಣುವಿನಲ್ಲಿಯೇ ಇರುವ ಕಾರಣ 'ಅದ್ವೈತ' ಪ್ರಜ್ಞೆಯನ್ನು ಕಾಪಾಡಿಕೊಂಡು, 'ವಿಶಿಷ್ಟಾದ್ವೈತ'ವನ್ನು ರಾಮಾನುಜರು ಎತ್ತಿಹಿಡಿದರು. ಶಂಕರರು 'ಜ್ಞಾನ'ದ ಮೇಲೆ ಒತ್ತಡವಿತ್ತರೆ, ರಾಮಾನುಜರು 'ಭಕ್ತಿ'ಯ ಮೇಲೆ ಒತ್ತಡವಿತ್ತರು. ೭೦೦ ವರ್ಷಗಳ ಮುನ್ನ ಆಚಾರ್ಯ ಆನಂದತೀರ್ಥರು ಉದ್ಭವಿಸಿ, ಅದ್ವೈತ ಶಬ್ದದ ಹಾವಳಿಯನ್ನು ನಿವಾರಿಸಲು ದ್ವೈತ ಸಿದ್ಧಾಂತವನ್ನೂ, ಹರಿಸರ್ವೋತ್ತಮತ್ವವನ್ನೂ ಮುಂದೆ ತಂದರು. ಉತ್ತರ-ಭಾರತದಲ್ಲಿ ಕಬೀರ-ನಾನಕರೂ, ದಕ್ಷಿಣದಲ್ಲಿ ಬಸವೇಶ್ವರರೂ ಸುಪ್ತ ಜನತೆಯನ್ನು ಎಚ್ಚರಿಸಲು, ಸುಪ್ತ ಬುದ್ಧಿಯನ್ನೆಚ್ಚರಿಸಲು ದುಡಿದರು. ಆದರೂ, ಈ ಎಲ್ಲರ ಯತ್ನಗಳೂ ಬೇರೆ-ಬೇರೆ ಮತಗಳೇ ಆಗಿಹೋಗಿ, ಸರ್ವಧರ್ಮದ ಸತ್ಯ ಆಶ್ರಯವಾದ ವೇದಗಳತ್ತ ಯಾರ ಚಿತ್ತವೂ ಹೊರಳಲಿಲ್ಲ. ಆಚಾರ್ಯತ್ರಯರು 'ವೇದ, ವೈದಿಕಧರ್ಮ'-ಎಂಬ

ಪದಗಳನ್ನೇನೋ ಬಳಸಿಕೊಂಡರೂ, ಮೂಲವೇದವನ್ನು ಮುಟ್ಟುವ ಗೋಜಿಗೇ ಹೋಗಲಿಲ್ಲ. ವೇದವಾಣಿಯ ಮಂಜುಳನಿನಾದದಿಂದ ಕೇವಲ ಭಾರತವನ್ನಲ್ಲ; ಸಮಸ್ತಭೂಮಂಡಲವನ್ನೇ ತುಂಬಿಸಬಲ್ಲ ನಿರ್ಭೀತ ಋಷಿಯೊಬ್ಬನ ಆವಶ್ಯಕತೆಯಿದ್ದಿತು. ಆ ಆವಶ್ಯಕತೆಯ ಪೂರ್ತಿಗಾಗಿಯೇ ಮೈತಳೆದು ಬಂದ ನಿರ್ಮಲ ಪ್ರತಿಭೆ "ದಯಾನಂದಸರಸ್ವತಿ"-ಎಂದು ವಿರಾಜಿಸಿತು.

## ಮಹರ್ಷಿ ದಯಾನಂದಸರಸ್ವತಿಗಳ ಜನ್ಮ ಮತ್ತು ಬಾಲ್ಯ

ಸನ್ ೧೮೨೪ನೆಯ ಇಸವಿಯಲ್ಲಿ ಮೋರವೀ ಸಂಸ್ಥಾನದ ಟಂಕಾರಾ ಗ್ರಾಮದಲ್ಲಿ, ಸೌರಾಷ್ಟ್ರ ಪ್ರಾಂತದಲ್ಲಿ ಜನ್ಮವೆತ್ತಿದರು ಮಹರ್ಷಿ ದಯಾನಂದಸರಸ್ವತೀ. ಅವರು ಚೇತನೋಪಾಸನೆಯತ್ತ ಚಿತ್ತಹರಿಸಲು ಕಾರಣಭೂತವಾದ ಘಟನೆ ೧೮೩೮ರ ಶಿವರಾತ್ರಿಯಂದು, ಶಿವಮಂದಿರದಲ್ಲಿ, ನಟ್ಟಿರುಳಿನಲ್ಲಿ ನಡೆಯಿತು. ೧೪ ವರ್ಷಗಳ ಬಾಲಕ ಮೂಲಶಂಕರ-ಅದೇ ಮಹರ್ಷಿಗಳ ಪೂರ್ವಾಶ್ರಮದ ಹೆಸರು-ಅಪ್ರತಿಮ ನಿಷ್ಠಾವಂತ ಶೈವ ಬ್ರಾಹ್ಮಣರಾಗಿದ್ದ ತನ್ನ *ತಂದೆ ಕರ್ಷನ್‌ಜೀ ತಿವಾರಿಗಳೊಂದಿಗೆ* ಉಪವಾಸ-ಜಾಗರಣ-ಪೂಜನಗಳ ವ್ರತತೊಟ್ಟು, ಶಿವದೇಗುಲದಲ್ಲಿ, ಎಲ್ಲರೂ, ಕೊನೆಗೆ ತನ್ನ ತಂದೆಯೂ ಕೂಡ ಗಾಢನಿದ್ರಾಪರ್ಯಂಕದಲ್ಲಿ ಪವಡಿಸಿದಾಗ, ವ್ರತಭಂಗವಾಗಬಾರದೆಂಬ ದೃಢ ಸಂಕಲ್ಪದಿಂದ, ನಿದ್ದೆ ಬಂದಂತಾದಾಗಲೆಲ್ಲಾ ಕಣ್ಣುಗಳ ಮೇಲೆ ತಣ್ಣೀರನ್ನೆರಚಿಕೊಳ್ಳುತ್ತಾ ಕುಳಿತಿದ್ದನು. ಇದ್ದಕ್ಕಿದ್ದಂತೆಯೇ ಇಲಿಗಳು ಬಂದು, ಶಿವಲಿಂಗದ ಮೇಲೇರಿ, ಕುಣಿದಾಡಿ, ನೈವೇದ್ಯಗಳನ್ನು ಕುರುಕಿ- ಕುರುಕಿ ತಿನ್ನುವುದನ್ನು ಕಂಡು ಆ ಬಾಲಕ ಸ್ತಬ್ಧನಾದನು. "ರಕ್ಕಸರ ಸೈನ್ಯಗಳನ್ನೇ ಹತ್ತಿಕ್ಕಬಲ್ಲ ಶಿವನೆಲ್ಲಿ? ಇಲಿಗಳನ್ನು ಬೆದರಿಸಲಾರದ ಈ ಲಿಂಗವೆಲ್ಲಿ"?-ಎಂಬ, ಸರಳವಾದರೂ ಜಟಿಲವಾದ ಪ್ರಶ್ನೆ ಮೂಲಶಂಕರನ ಮಸ್ತಿಷ್ಕದಲ್ಲಿ ತಾನೇ ತಾನಾಗಿ ತಲೆಯೆತ್ತಿತು. ಎಲ್ಲ ಲೌಕಿಕರೂ ಕೊಡುವಂತೆಯೇ ಕರ್ಷನ್‌ಜೀ ಕೂಡ ಪ್ರತೀಮೋಪಾಸನೆಯ ಬಗೆಗೆ ಕೊಟ್ಟ ವಿವರಣೆ ಬಾಲಕನ ಬುದ್ಧಿಗೊಪ್ಪಲಿಲ್ಲ. "ನನಗೆ ಚೇತನೇಶ್ವರನ ಅನುಭೂತಿಯಾದಂದೇ ಉಪಾಸನೆಮಾಡುವೆ".- ಎಂಬ ನಿರ್ಣಯದೊಂದಿಗೆ ಮಂದಿರದ ಹೊಸ್ತಿಲನ್ನು ದಾಟಿದನು. ತನ್ನ ಚಿಕ್ಕಪ್ಪನ ಬೆಂಬಲದಿಂದ ಅಧ್ಯಯನದಲ್ಲಿ ನಿರತನಾದನು; ಪೂರ್ಣ ಯಜುರ್ವೇದವನ್ನು ಕಂಠಪಾಠ ಮಾಡಿದನು. ಇನ್ನೆರಡು ವರ್ಷಗಳು ಉರುಳಿದವು. ಚಿಕ್ಕ ತಂಗಿ ವಾಂತಿಭೇದಿಯ ಮಾರಕವ್ಯಾಧಿಗೆ ತುತ್ತಾಗಿ ಸದಾ ಕಾಲಕ್ಕೂ ಕಣ್ಮುಚ್ಚಿದಳು. ಪರಿವಾರ-ಪರಿಜನರೆಲ್ಲಾ, ತಾಯಿ-ತಂದೆಗಳೊಂದಿಗೆ ಕಂಬನಿಗರೆಯುತ್ತಾ ಹಾಹಾಕಾರ ಮಾಡುತ್ತಿದ್ದಾಗ, ಬಾಲಕ ಮೂಲಶಂಕರನು ಸ್ತಬ್ಧನಾಗಿ, ಮೌನದಿಂದ ಗೋಡೆಗೊರಗಿ, ತಂಗಿಯ ತಣ್ಣಗಾದ ತನುವನ್ನೇ ನಿಟ್ಟಿಸುತ್ತಾ "ಸಾವಾರು, ನಾವಾರು?"- ಎಂದು ಚಿಂತಿಸುತ್ತಿದ್ದನು. ಕಣ್ಣುಗಳಲ್ಲಿ ಕಂಬನಿಯಿಲ್ಲ; ರೋದನದ ದನಿಯಿಲ್ಲ. "ಕಠೋರನೀ ಬಾಲ".-ಎಂದವರು ಎಂದರು. ಬಾಲಕನ ನೋವಿನಾಳವನ್ನು ಅಳೆಯಬಲ್ಲವರು ಅಲ್ಲಿರಲಿಲ್ಲ.

ಮತ್ತೆ ಮೂರು ವರ್ಷಗಳು ಉರುಳಿದವು. ಮೂಲಶಂಕರನಿಗೆ ಅತ್ಯಂತ ಆಪ್ತನಾಗಿದ್ದ ಹಾಗೂ ಸ್ವತಃ ವಿದ್ವಾಂಸನಾಗಿದ್ದ ಅವನ ಚಿಕ್ಕಪ್ಪನೂ ಅದೇ ಉಪದ್ರವಕ್ಕೆ ಸಿಕ್ಕಿ 'ಇಲ್ಲ'ವಾದಾಗ, ಮೂಲಶಂಕರನ ಹೃದಯದ ಅಂತರಾಳದಲ್ಲಿ ಅಡಗಿದ್ದ ಅಳುವೆಲ್ಲಾ, ಅಲುಕೆಲ್ಲಾ, ಕಟ್ಟೆಯೊಡೆದ ಕೆರೆಯ ನೀರಿನಂತೆ ಚಿಲ್ಲಿ ಹರಿಯಿತು. ತಂಗಿಗಳದವನು ತನ್ನ ಚಿಕ್ಕಪ್ಪನಿಗಾಗಿ ಹುಚ್ಚನಂತೆ ಅತ್ತನು. ಕಣ್ಣುಗಳೂದಿಕೊಂಡವು; ಗಂಟಲು ಕಟ್ಟಿತು. ಅನ್ನ-ನೀರುಗಳ ಆಕಾಂಕ್ಷೆ ಇಂಗಿಹೋಯಿತು. ವೈರಾಗ್ಯಭಾವನೆ ಅವನ ಅಂತಃಕರಣದ ಕಣ-ಕಣದಲ್ಲಿಯೂ ಬೇರುಬಿಟ್ಟಿತು.

ಮಗನ ವೈರಾಗ್ಯವನ್ನು ಹೊತ್ತಿಕ್ಕಲು, ಹೊಸಕಿಹಾಕಲು ಮದುವೆಯೇ ಸೋಲದ ಚಿಕಿತ್ಸೆಯೆಂದರಿತ ಮಾತಾ-ಪಿತೃಗಳು ಯೋಗ್ಯ ಕನ್ಯೆಯ ಅನ್ವೇಷಣವನ್ನಾರಂಭಿಸಿದರು. ವೈರಾಗ್ಯವಾನ್ ಯುವಕನು, ಯಾರಾರಿಂದಲೋ ಹೇಳಿಸಿ, ವಿವಾಹವನ್ನು ಮುಂದೂಡಿಸಿದನು. ಆದರೆ, ಮುಂದೂಡುವಿಕೆಯ ಅರ್ಥ ಮುರಿದುಹಾಕುವಿಕೆಯಲ್ಲ; ಮರಳಿ ಮದುವೆಯ ಮಾತು ಯಾವ ಕ್ಷಣದಲ್ಲಿಯೇ ಆದರೂ ಮುಂದೆ ಬರಬಹುದು-ಎಂಬ ತಥ್ಯವನ್ನು ಯುವಕ ವೈರಾಗೀ ಮೂಲಶಂಕರನು ಸುಲಭವಾಗಿಯೇ ಗುರುತಿಸಿದನು. ಗೃಹತ್ಯಾಗವನ್ನುಳಿದು ಬೇರಾವ ಮಾರ್ಗವೂ ಇಲ್ಲವೆಂದವನು ನಿರ್ಧರಿಸಿದನು.

ಮೂಲಶಂಕರ ೨೨ ವರ್ಷದವನಾಗಿದ್ದಾಗ, ಒಂದು ಸಂಜೆ ಮನೆಯಿಂದ ನುಸುಳಿದನು. ಸಿದ್ಧಪುರಕ್ಕೆ ಹೋಗುವ ಮಾರ್ಗದಲ್ಲಿ ಒಬ್ಬ ಸಾಧುವಿನಿಂದ ನೈಷ್ಠಿಕ ಬ್ರಹ್ಮಚರ್ಯದ ದೀಕ್ಷೆತಳೆದು "ಬ್ರಹ್ಮಚಾರೀ ಶುದ್ಧಚೈತನ್ಯ"ನಾದನು. ಸಿದ್ಧಪುರದ ದೇಗುಲವೊಂದರಲ್ಲಿ ಇದ್ದಕ್ಕಿದ್ದಂತೆ ಕರ್ಷನ್‌ಜೀ ಎದುರುಬಂದು, ಮಗನನ್ನು ಬಂಧಿಸಿದರು. ಶ್ವೇತವಸ್ತ್ರಗಳನ್ನು ತೊಡಿಸಿ, ಪೀತವಸ್ತ್ರಗಳನ್ನು ಗಾಳಿಗೆ ತೂರಿ, ಮಗನನ್ನು ತಮ್ಮ ಬಿಡಾರಕ್ಕೆ ಒಯ್ದರು. ಪುತ್ರನನ್ನು ಮನೆಗೊಯ್ಯಬೇಕೆಂಬ ಆಕಾಂಕ್ಷೆ ತಂದೆಗೆಷ್ಟಿದ್ದಿತೋ, ಆದಕ್ಕಿಂತ ಮಿಗಿಲಾದ ಆಕಾಂಕ್ಷೆ ಮರಳಿ ತಪ್ಪಿಸಿ ಜಾರಬೇಕೆಂದು ಮಗನಿಗಿತ್ತು.

ಎರಡು ದಿನಗಳನ್ನು ಶುದ್ಧ ಚೈತನ್ಯ ಹೇಗೋ ಬಂಧನದಲ್ಲಿ ಕಳೆದನು. ಮೂರನೆಯ ರಾತ್ರಿ ಕಾವಲುಗಾರರ ಕಣ್ಣನ್ನು ತಪ್ಪಿಸಿ ಹೇಗೋ ಜಾರಿದನು ತಂದೆಯ ಬಂಧನದಿಂದ ಆ ಶುದ್ಧ ಚೈತನ್ಯ, ಮತ್ತೆ ತಂದೆಯ ಬಂಧನಕ್ಕೆ ಸಿಕ್ಕಲೇ ಇಲ್ಲ.

## ಯತಿದೀಕ್ಷೆ

ಶುದ್ಧ ಚೈತನ್ಯ ಈ ಹಂತ ಮುಟ್ಟಿದಾಗ, ಸನ್ ೧೮೪೭ನೆಯ ಇಸವಿ ನಡೆದಿತ್ತು. ಆಗಿನಿಂದ ಹಿಡಿದು ೧೪ ವರ್ಷಗಳ ಕಾಲ, ನಿರಂತರವೂ ಆಬೂ-ವಿಂಧ್ಯ-ಹಿಮಾಲಯ ಪರ್ವತಗಳಲ್ಲೆಲ್ಲಾ ಸಾವನ್ನು ಸದೆಬಡಿಯುವ ಸಾಮರ್ಥ್ಯಸಂಪನ್ನ ಸಿದ್ಧಯೋಗಿಗಳನ್ನು ಹುಡುಕುತ್ತಾ

ತಿರುಗಿದನು. ಓಖೀಮಠದ ಮಹಂತನೊಡ್ಡಿದ ಪ್ರಲೋಭನಕ್ಕೆ ಮಣಿಯದೆ, ವನ-ವನದಲ್ಲಿ, ಗುಹೆ-ಗುಹೆಯಲ್ಲಿ, ನದಿ-ನದಿಯಲ್ಲಿ ಓಡಾಡಿದನು. ಕೊನೆಗೆ ಒಬ್ಬ ದಾಕ್ಷಿಣಾತ್ಯ ಸಂನ್ಯಾಸೀ ಪೂರ್ಣಾನಂದಸರಸ್ವತಿಗಳಿಂದ ಯತಿ-ದೀಕ್ಷೆ ಪಡೆದು ಅದೇ ಶುದ್ಧ ಚೈತನ್ಯ ಸ್ವಾಮೀ ದಯಾನಂದ ಸರಸ್ವತಿಯಾದನು.

ಕಾಷಾಯವಸ್ತ್ರದಿಂದ ಜ್ಞಾನ-ಪಿಪಾಸೆ ತುಂಬಲಿಲ್ಲ; ಸಾವನ್ನೇ ಸಾಯಿಸಬೇಕೆಂಬ ಛಲ ತೀರಲಿಲ್ಲ. ಸ್ವಾಮೀ ದಯಾನಂದರು ನರ್ಮದಾತಟದಲ್ಲಿ ಯೋಗ್ಯ ಗುರುವನ್ನರಸುತ್ತಾ ತಿರುಗುತ್ತಿದ್ದಾಗ, ಮಥುರಾನಿವಾಸೀ ವ್ಯಾಕರಣಭಾಸ್ಕರ, ಪ್ರಜ್ಞಾಚಕ್ಷು ವಿರಜಾನಂದ ದಂಡೀಶರ ಯಶೋವಿಲಾಸ ಕಿವಿದೆರೆಗೆ ತಗಲಿತು. ಸರಿ; ೧೮೬೦ನೆಯ ಇಸವಿಯಲ್ಲಿ ಒಂದು ಮಧ್ಯಾಹ್ನ ಸ್ವಾಮೀ ದಯಾನಂದಸರಸ್ವತಿಗಳು ಮಥುರಾನಗರಿಯ ಯಮುನಾಘಾಟಿನ ಮಾರ್ಗದಲ್ಲಿದ್ದ ಗುರುವರ ವಿರಜಾನಂದರ ಕುಟೀರದ ದ್ವಾರವನ್ನು ತಟ್ಟಿದರು. ಆಗ ಪ್ರಜ್ಞಾಚಕ್ಷು ವಿರಜಾನಂದ ದಂಡೀಶ್ವರರು ತೆರೆದುದು ತಮ್ಮ ಅರ್ಧಭಗ್ನ ಕುಟೀರದ ಬಾಗಿಲನ್ನಲ್ಲ; ನಿರ್ಭ್ರಾಂತ ಜ್ಞಾನ ಭಂಡಾರದ ಪ್ರಶಸ್ತ ದ್ವಾರವನ್ನೇ.

## ಗುರು ವಿರಜಾನಂದರ ದರ್ಶನ ಮತ್ತು ವೇದಾದಿ ಸತ್ಯಶಾಸ್ತ್ರಗಳ ಅಧ್ಯಯನ.

ತೀಕ್ಷ್ಣ ಮೇಧಾವೀ ಸ್ವಾಮೀ ದಯಾನಂದರು ಪ್ರಜ್ಞಾಚಕ್ಷು ವಿರಜಾನಂದರ ಚರಣಾರವಿಂದಗಳಲ್ಲಿ ಹತ್ತಾರು ವರ್ಷಗಳಲ್ಲ; ಕೇವಲ ಎರಡೂವರೆ ವರ್ಷಕಾಲ ಮಾತ್ರ ಕಲಿತರು. ತಮ್ಮ ಬಾಲ್ಯದಲ್ಲೇ ಸಿಡುಬಿನಿಂದ ಎರಡು ಕಣ್ಣುಗಳನ್ನೂ ಕಳೆದುಕೊಂಡಿದ್ದ ಆ ಪ್ರಜ್ಞಾಚಕ್ಷು ಕೇವಲ ತನ್ನ ಅಲೌಕಿಕ ಸ್ಮರಣಶಕ್ತಿಯಿಂದ ವೇದಾದಿಶಾಸ್ತ್ರಗಳ ಮೇಲೆ ಪೂರ್ಣಾಧಿಕಾರಹೊಂದಿದ್ದರು. ವ್ಯಾರರಣದಲ್ಲಿಯಂತೂ ಅವರ ಸರಿತೂಗುವ ವ್ಯಕ್ತಿ ಅಂದು ಯಾರೂ ಇರಲಿಲ್ಲ. ದೈಹಿಕದೃಷ್ಟಿಯಿಂದ ಅಸ್ಥಿ ಪಂಜರಮಾತ್ರವಾದರೂ ಆಧ್ಯಾತ್ಮಿಕ ಶಕ್ತಿಯಲ್ಲಿ , ಶಾಸ್ತ್ರೀಯ ಜ್ಞಾನದಲ್ಲಿ, ನಿರ್ಭಯತ್ವದಲ್ಲಿ ಹಾಗೂ ತತ್ತ್ವ-ನಿಷ್ಠೆಯಲ್ಲಿ ಸರ್ವಥಾ ಅಸಮಾನರೇ ಆಗಿದ್ದರು ವಿರಜಾನಂದ ದಂಡೀಶ್ವರರು.

೮೧ ವರ್ಷದ ವೃದ್ಧ ಪ್ರಜ್ಞಾಚಕ್ಷುವಿನ ಬಳಿ, ೩೬ ವರ್ಷಗಳ ಯುವಕ, ಭೀಮಕಾಯ ಬೃಹನ್ಮೂರ್ತಿ, ಅತುಳಮೇಧಾವೀ-ತರ್ಕನಿಪುಣ ಸ್ವಾಮೀ ದಯಾನಂದರು ಹೋದರು. ಅಲ್ಪಕಾಲದಲ್ಲಿಯೇ ಅಖಿಳ ಶಾಸ್ತ್ರಗಳ ಮೇಲೆಯೂ ನಿರ್ವಿವಾದವೇ ಆದ ಅಖಂಡಾಧಿಕಾರವನ್ನು ಗಳಿಸಿಕೊಂಡರು. ಗುರುದೇವರು ಯೋಗ್ಯಶಿಷ್ಯನಿಗಾಗಿ ಕಾದಿದ್ದರು; ಶಿಷ್ಯ-ಪ್ರವರರು ಯೋಗ್ಯ ಗುರುವಿಗಾಗಿ ಕಾದಿದ್ದರು. ಭಗವದಿಚ್ಛೆಯಿಂದ ಇಬ್ಬರ ಕಾಮನೆಯೂ ಪೂರ್ಣವಾಯಿತು. ಸ್ವಾಮೀ ದಯಾನಂದರು ಶೀಘ್ರಕೋಪಿಗಳಾದ ವಿರಜಾನಂದರಿಂದ ಎಷ್ಟೋ ಸಾರಿ ಬೈಯಿಸಿಕೊಂಡಿದ್ದರು ; ದೊಣ್ಣೆಯ ಪೆಟ್ಟನ್ನೂ ಧಾರಾಳವಾಗಿ ತಿಂದಿದ್ದರು. ಆಗಿನ್ನೂ ವಿದ್ಯಾಪ್ರಪಂಚಕ್ಕೆ ಹರತಾಳಗಳು ಕಾಲಿಟ್ಟಿರಲಿಲ್ಲ. ತಾನು ಸಂನ್ಯಾಸಿ; ಉನ್ನತ ಕುಲೀನ ಬ್ರಾಹ್ಮಣ, ತಾನೇಕೆ ಪೆಟ್ಟನ್ನು ತಿನ್ನಬೇಕೆಂದು ಎಂದೂ ಯೋಚಿಸಲಿಲ್ಲ; "ಗುರುವಿತ್ತ ಶಿಕ್ಷೆ ಅಮರತ್ವದ ಭಿಕ್ಷೆ"-ಎಂದೇ ಭಾವಿಸಿ, ವಿನಯಾವನತಮಸ್ತಕರಾಗಿ ವಿದ್ಯೆ ಕಲಿತರು-ಆ ಪುರುಷಸಿಂಹ ದಯಾನಂದ ಸರಸ್ವತೀ.

## ಗುರುದಕ್ಷಿಣೆ ಮತ್ತು ಆಶೀರ್ವಚನ

ವಿದ್ಯಾಭ್ಯಾಸ ಮುಗಿಸಿ, ತ್ಯಕ್ತಸರ್ವಸ್ವರಾದ ದಯಾನಂದ ಸರಸ್ವತೀ ರಿಕ್ತಹಸ್ತರಾಗಿ ಗುರುವಿನ ಬಳಿ ತೆರಳಬಾರದೆಂಬ ಭವ್ಯವೈದಿಕ ಪರಂಪರೆಗೆ ಹೃದಯದಲ್ಲಿ ಎಡೆಯಿತ್ತಿದ್ದರು. ಅರ್ಧಮುಷ್ಟಿಯಷ್ಟು ಲವಂಗಗಳನ್ನು ತಟ್ಟೆಯಲ್ಲಿಟ್ಟು, ಗುರುಪದಯುಗ್ಮದಲ್ಲಿ ತಲೆಯನ್ನಿಟ್ಟು, ಗದ್ಗದಕಂಠರಾಗಿ -"ಗುರುದೇವ! ಈ ಕಿರಿ ಕಾಣಿಕೆಯನ್ನಂಗೀಕರಿಸಿ, ಹೊರತೆರಳಲು ಅನುಮತಿ ಕರುಣಿಸಿರಿ".- ಎಂದು ಕೇಳಿಕೊಂಡರು. "ಒಳಿತು, ದಯಾನಂದ! ಒಳಿತು, ಆದರೆ, ನಿನ್ನ ಈ ಗುರುದಕ್ಷಿಣೆ ಮಾತ್ರ ನಾನು ಒಪ್ಪಲಾರೆ".- ಎಂದರು ದಂಡೀಶರು.

ಗುರುದೇವ! ಎಲ್ಲವನ್ನೂ ತೊರೆದ ನನ್ನ ಬಳಿ ಇರುವುದಾದರೂ ಏನು?" ಸ್ವಲ್ಪ ಭೀತರಾಗಿ ಕೇಳಿದರು ದಯಾನಂದರು. "ನಿನ್ನ ಬಳಿಯಿದೆ ದಯಾನಂದ! ನಿಜವಾಗಿಯೂ ಇದೆ. ಕೊಡುವೆಯಾ?"-ಎಂದು ಪ್ರಶ್ನಿಸಿದರು ಗುರುದೇವ. "ಮಹಾರಾಜ್! ಅಪ್ಪಣೆಕೊಡಿರಿ. ಪ್ರಾಣಗಳನ್ನಾದರೂ ಪಣವಾಗಿ ಒಡ್ಡಿ, ತಮಗೆ ಗುರುದಕ್ಷಿಣೆ ಸಲ್ಲಿಸುವೆ".-ಎಂದರು ಸ್ವಾಮೀ ದಯಾನಂದರು. "ವತ್ಸ! ಅನಾರ್ಷಗ್ರಂಥಗಳ ಪಠನ-ಪಾಠನದಿಂದಾಗಿ, ಜಗತ್ತಿಗೆಲ್ಲಾ ಗುರುಸ್ಥಾನೀಯವಾದ ಈ ಆರ್ಯಾವರ್ತ ತಳವಿಲ್ಲದ ಅಂಧಕಾರದ ಕೂಪವಾಗಿದೆ. ಆರ್ಷ ಗ್ರಂಥಗಳನ್ನು ಪ್ರಸರಿಸಿ, ಸಂಪೂರ್ಣ ಭಾರತದಲ್ಲಿಯೇ ನಿರ್ಮಲ ವೇದಜ್ಞಾನದ ಮೇಲೆ ನಿಂತ ಮಾನವಧರ್ಮವನ್ನು ಪ್ರವರ್ತಿಸುವೆನೆಂದು ವಚನಕೊಡು"-ಎಂದರು ಗುರುದೇವ ವಿರಜಾನಂದ ದಂಡೀಶ್ವರರು. "ತಮ್ಮ ಆಜ್ಞೆ ಸದಾ ಶಿರೋಧಾರ್ಯ ನನಗೆ. ವಚನವಿತ್ತೆ, ಗುರುದೇವ".-ಎಂದು ತಲೆಬಾಗಿಸಿ ಹೇಳಿದರು ದಯಾನಂದ ಸರಸ್ವತೀ.

## ಯೋಗಿರಾಜರ ಕಣ್ಮುಂದೆ ಇದ್ದ ಧಾರ್ಮಿಕ ಪರಿಸ್ಥಿತಿ ಮತ್ತು ಪರಾಧೀನ ಭಾರತ.

ಸ್ವಾಮೀ ದಯಾನಂದರು ತಮ್ಮ ಗುರುವರ್ಯರಿಗೆ ವಚನವಿತ್ತು ಮಥುರಾನಗರಿಯಿಂದ ಆಗ್ರಾದ ಕಡೆಗೆ ತೆರಳಿದುದು ೧೮೬೩ನೆಯ ಇಸವಿಯಲ್ಲಿ. ಕೊನೆಯ ಸಮರ್ಥ ಮುಗಲ್ ಸಾಮ್ರಾಟ್ ಔರಂಗಜೇಬನು ೧೭೦೭ರಲ್ಲಿ ಕಣ್ಮುಚ್ಚಿದನು. ಅವನ ನಂತರ ಸಮರ್ಥರಾದ ಸಾಮ್ರಾಟರಾರೂ ಗದ್ದುಗೆಗೇರಲಿಲ್ಲ. ಔರಂಗಜೇಬನ ಮತ್ತು ಅವನ ಮುನ್ನ ಆಳಿದ ಶಾಹ್‌ಜಹಾನ್ ಹಾಗೂ ಜಹಾನ್‌ಗೀರರ ಕಾಲದಲ್ಲಿ

ರಾಜಭಯದಿಂದಲೂ, ಪ್ರಲೋಭನಗಳಿಂದಲೂ, ಸಾಮಾಜಿಕ ನೀಚೋಚ್ಚಭಾವನೆಗಳ ಪರಿಣಾಮವಾಗಿಯೂ ಹಿಂದೂಗಳ ಹಳ್ಳಿ-ಹಳ್ಳಿಗಳೇ ಸಾಮೂಹಿಕವಾಗಿ ಇಸ್ಲಾಂ ಮತವನ್ನಂಗೀಕರಿಸಿದ್ದವು. ಈ ಬಲವಂತದ ಮಾಘಸ್ನಾನ ಔರಂಗಜೇಬನು ಮಾಂಡಲಿಕರನ್ನಾಗಿ ನೇಮಿಸಿದ್ದ ಪ್ರಾಂತಪಾಲರುಗಳೂ, ಸೂಬೇದಾರರೂ ಕೂಡ ಮಾಡಿಸುತ್ತಲೇ ನಡೆದಿದ್ದರು. ದಿನದಿನಕ್ಕೆ ಸಂಖ್ಯಾಬಲದಲ್ಲಿಯೂ, ಧರ್ಮಜ್ಞಾನ ಸಂಪತ್ತಿನಲ್ಲಿಯೂ ವೈದಿಕ ಧರ್ಮೀಯರು ಕುಗ್ಗುತ್ತಲೇ ಸಾಗಿದ್ದರು. ಯಾರೇನೇ ಹೇಳಲಿ; ಗೌತಮ ಬುದ್ಧನ ಹಾಗೂ ಮಹಾವೀರತೀರ್ಥಂಕರರ, ಅಳತೆಮೀರಿದ ಅಹಿಂಸಾತತ್ತ್ವದ ಪ್ರಸಾರದಿಂದಾಗಿ ವೈದಿಕಧರ್ಮೀಯರು ಆಕ್ರಮಣಕಾರಿಗಳ ಮುಂದೆ ತಲೆಬಾಗುತ್ತಲೇ ಬಂದಿದ್ದರು. ಸಾವಿರ ವರ್ಷಗಳ ಇಸ್ಲಾಮೀ ಆಡಳಿತದ ಪರಿಣಾಮವಾಗಿ ವೇದಾನುಯಾಯಿಗಳು ಅತ್ಯಂತ ಶಕ್ತಿಹೀನರಾಗಿದ್ದರು. ಪರಮಾತ್ಮನಿಂದ ಕೇವಲ ಒಂದಾಗಿ ಸೃಜಿಸಲ್ಪಟ್ಟಿದ್ದ ಮಾನವ ಸಮಾಜ, ಈಶ್ವರೋಕ್ತವೇದಗಳ ಜ್ಞಾನದ ಪ್ರಸರಣದ ಅಭಾವದಿಂದಾಗಿ ಛಿದ್ರ-ಛಿದ್ರವಾಗಿದ್ದಿತು. ಅಖಂಡ ಮಾನವ ಸಮತಾ ಸಂದೇಶವನ್ನು ಸಾರುವ ವೇದಗಳ ಪ್ರತಿಯಾಗಿ, ವ್ಯಾಸರ ಹೆಸರಿನಲ್ಲಿ ಯಾರಾರಿಂದಲೋ ರಚಿಸಲ್ಪಟ್ಟ ೧೮ ಪುರಾಣಗಳ ಹಾಗೂ ಮಾನವನನ್ನು ದಾನವನನ್ನಾಗಿ ಪರಿವರ್ತಿಸುವ ತಂತ್ರಗಳ ವಿಸ್ತರಣದಿಂದ ಭಾರತೀಯ ಸಮಾಜ ಮತ-ಮತಾಂತರಗಳಲ್ಲಿ ಹರಿದು ಹಂಚಿಹೋಗಿದ್ದಿತು. ಇಸ್ಲಾಮೀ ಒತ್ತಡ ಸಾಲದೆಂದು, ದುರ್ದಶಾಗ್ರಸ್ತ ಭಾರತದ ಮೇಲೆ ಐರೋಪ್ಯರ ವಕ್ರದೃಷ್ಟಿ ಬೇರೆ ಬಿದ್ದಿದ್ದಿತು. ಇಂಗ್ಲೆಂಡಿನ ರಾಣಿ ಎಲಿಜಬೆತಳು ತನ್ನ ಪ್ರತಿ ನಿಧಿಯಾಗಿ ಸರ್ ಥಾಮಸ್ ರೋ-ಎಂಬ ದೂತನನ್ನು ಜಹಾಂಗೀರ್ ಬಾದಶಾಹನ ಆಸ್ಥಾನಕ್ಕೆ ಕಳುಹಿಸಿದ್ದಳು. ಸರ್ ಥಾಮಸ್ ಸಮರ್ಥ ಚಿಕಿತ್ಸಕನೂ ಆಗಿದ್ದನು: ಬಾದಶಾಹನ ಮುದ್ದಿನ ಮಗಳಿಗೆ ಬಂದಿದ್ದ ಯಾವುದೋ ವ್ಯಾಧಿಯನ್ನು ಸರ್ ಥಾಮಸ್ ಗುಣಪಡಿಸಿದನು. ಬಾದಶಾಹನು 'ನಿನಗೇನು ಕೊಡಲಿ?' ಎಂದು ಕೇಳಿದಾಗ, ದೇಶಭಕ್ತ ಸರ್ ಥಾಮಸ್ ರೋ-'ನನ್ನ ರಾಷ್ಟ್ರದ ಜನರಿಗೆ ನಿನ್ನ ಸಾಮ್ರಾಜ್ಯದಲ್ಲಿ ವ್ಯಾಪಾರ ಮಾಡುವ ಅಧಿಕಾರವನ್ನು ಕರುಣಿಸು'- ಎಂದು ಕೇಳಿಕೊಂಡನು. ಬಾದಶಾಹನ ಕೃಪೆಯಿಂದ ಆಂಗ್ಲರು 'ಈಸ್ಟ್ ಇಂಡಿಯಾ ಕಂಪೆನಿ'-ಎಂಬ ಸಂಸ್ಥೆಯ ಆಶ್ರಯದಲ್ಲಿ, ಸೂರತ್ ನಲ್ಲಿ ಪ್ರಥಮ ವ್ಯಾಪಾರಮಳಿಗೆ ಸ್ಥಾಪಿಸಿ, ವಾಣಿಜ್ಯವನ್ನಾರಂಭಿಸಿದರು.

## ವ್ಯಾಪಾರ ನೆಪದಲ್ಲಿ ಆಂಗ್ಲರ ಆಗಮನಾರಂಭ

ಸ್ವಾಮೀ ದಯಾನಂದರು ಕಾರ್ಯರಂಗಕ್ಕಿಳಿದಾಗ, ಮುಗಲ್ ಸಾಮ್ರಾಜ್ಯ ಮಣ್ಣುಗೂಡಿ ಅದೆಷ್ಟೋ ಕಾಲ ಸಂದಿತ್ತು. ಔರಂಗಜೇಬನ ನಂತರ, ಅವನ ರಾಜಪ್ರತಿನಿಧಿಗಳಾಗಿದ್ದ ನವಾಬರುಗಳೇ ಸ್ವತಂತ್ರ ರಾಜರುಗಳಾಗಿ ಹೋಗಿದ್ದರು. ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಬ್ರಿಟಿಷರು ಈ ನವಾಬರುಗಳ ಅಪ್ಪಣೆಯಿಂದಲೇ ವ್ಯಾಪಾರ ಮಳಿಗೆಗಳನ್ನು ಕಟ್ಟಿಕೊಂಡು ವ್ಯವಹಾರ ನಡೆಸುತ್ತಿದ್ದರು. ಮೇಲೆ ಹೇಳಿದ ಐರೋಪ್ಯರುಗಳು ಕೇವಲ ವ್ಯಾಪಾರ-ವಾಣಿಜ್ಯಗಳಲ್ಲಿಯೇ ಇದ್ದಿದ್ದರೆ, ಭಾರತಕ್ಕಿಷ್ಟು ದುರ್ಗತಿ ಪ್ರಾಪ್ತವಾಗುತ್ತಿರಲಿಲ್ಲ. ಈ ವಿದೇಶೀಯರು ಭಾರತವನ್ನಾಳುವ ಮಹದಾಕಾಂಕ್ಷೆಗಳನ್ನು ತಾಳಿದ್ದರು; ಮತ್ತು ಆಳಲ್ಪಡುವ ಜನಾಂಗದ ಮೇಲೆ ತಮ್ಮ ಪೂರ್ಣಾಧಿಕಾರವನ್ನು ಸ್ವೀಕರಿಸಬೇಕಾದರೆ, ಆ ಹತಭಾಗ್ಯ ಜನಾಂಗದ ಧರ್ಮ, ಸಭ್ಯತೆ, ಸಂಸ್ಕೃತಿ-ಎಲ್ಲವನ್ನೂ ತುಚ್ಛೀಕರಿಸುವ ಮನೋಭಾವವನ್ನು ಆಳಲ್ಪಡುವ ಜನಾಂಗದ ನಾಯಕರುಗಳ ಅಂತರ್ಯದಲ್ಲಿ ಮೂಡಿಸುವುದಕ್ಕಿಂತ ಉತ್ತಮವಾದ ಉಪಾಯ ಬೇರೆ ಯಾವುದೂ ಇಲ್ಲವೆಂಬ ತಥ್ಯವನ್ನು ಅವರು ಕಂಡುಕೊಂಡರು. ಕಾಲಕ್ರಮದಲ್ಲಿ ಡಚ್ಚರ ನೆರಳೂ ಕೂಡ ಭಾರತದಲ್ಲಿ ಉಳಿಯಲಿಲ್ಲ. ಪೋರ್ಚುಗೀಸರು ಗೋವಾ, ದಾಮನ್, ದಿಯು -ಈ ಮೂರು ಎಡೆಗಳಲ್ಲಿ ಉಳಿದುಕೊಂಡರು. ಹಾಗೆಯೇ ಡೂಪ್ಲೇ ಕಂಡ ಕನಸನ್ನು ನನಸಾಗಿ ಮಾಡುವ ದಿಟ್ಟತನ ಫ್ರಾನ್ಸ್‌ಗೆ ಇಲ್ಲದ ಕಾರಣ ಕೇವಲ ಪುದುಚೇರೀ, ಕಾರೈಕಲ್, ಮಾಹೀ, ಯಾನಾಂ ಹಾಗೂ ಚಂದ್ರನಗರ- ಈ ಐದು ಉಪನಿವೇಶಗಳಲ್ಲಿ ಮಾತ್ರ ಫ್ರೆಂಚರು ಉಳಿದರು. ಆದರೆ, ಬ್ರಿಟನ್ನಿನಲ್ಲಿ, ಲಂಡನ್ ನಗರದಲ್ಲಿ ತಮ್ಮ ಕಂಪೆನಿಯ ಕೇಂದ್ರವನ್ನು ನೆಲೆಗೊಳಿಸಿ, ಬ್ರಿಟಿಷರು ಈಸ್ಟ್ ಇಂಡಿಯಾ ಕಂಪೆನಿಯ ಮೂಲಕ, ಭಾರತದ ಮೇಲೆ ತಮ್ಮ ಶಾಸನಾಧಿಕಾರವನ್ನು ದೃಢವಾಗಿಯೇ ನೆಲೆಗೊಳಿಸಿದರು.

## ಬ್ರಿಟಿಷರ ಅಧಿಪತ್ಯ

ರಾಬರ್ಟ್ ಕ್ಲೈವನು ೧೭೫೧ರಲ್ಲಿ ಆರ್ಕಾಟ್ ಮುತ್ತಿಗೆಯಿಂದ ಜಯಶಾಲಿಯಾದನು; ಪುನಃ ೧೭೫೭ರಲ್ಲಿ ಸಿರಾಜ್-ಉದ್-ದೌಲನ ವಿರುದ್ಧ ಪ್ಲಾಸೀ ಎಂಬಲ್ಲಿ ಹೋರಾಡಿ ಗೆದ್ದನು. ಸರ್ ಐರ್ ಕೂಟನು ೧೭೬೦ರಲ್ಲಿ ವಾಂಡೀವಾಶ್‌ನಲ್ಲಿ ಹೋರಾಡಿ ಜಯಗಳಿಸಿದನು. ಈ ಮೂರು ಜಯಗಳು ಭಾರತದಲ್ಲಿ ಬ್ರಿಟಿಷರ ಸಾಮ್ರಾಜ್ಯದ ಮೂರು ಮೈಲುಗಲ್ಲುಗಳಾಗಿ, ಸಂಪೂರ್ಣ ಭಾರತ ಕ್ರಮ-ಕ್ರಮವಾಗಿ ಬ್ರಿಟಿಷರ ಬೃಹತ್ಸಾಮ್ರಾಜ್ಯವಾಗಿ ರೂಪಿಸಲ್ಪಟ್ಟಿತು. ೧೭೯೯ರಲ್ಲಿ ಜನರಲ್ ಹ್ಯಾರಿಸ್ಸನು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ, ಆ ಹೋರಾಟದಲ್ಲಿ ಟಿಪ್ಪೂ ಮೃತನಾದ ಮೇಲೆ, ಬ್ರಿಟಿಷರನ್ನು ಎದುರಿಸಬಲ್ಲ ಶಕ್ತಿ ಯಾವುದೂ ಉಳಿಯಲಿಲ್ಲ.

## ಅಸಮರ್ಥ ಭಾರತಕ್ಕೆ ಮಹರ್ಷಿಯವರ ಜೀವದಾನ

೧೮೫೭ರಲ್ಲಿ ನಡೆದ ಸಿಪಾಯಿಗಳ ದಂಗೆ, ನಾನಾರಾಯನ ದಂಗೆ, ಭಾರತ ಸ್ವಾತಂತ್ರ್ಯದ ಪ್ರಥಮ ಸಂಗ್ರಾಮ-ಎಂದೆಲ್ಲಾ ಕರೆಯಲ್ಪಡುವ ರಕ್ತಪಾತದ ದುರ್ಘಟನೆಯ ನಂತರ, ಬ್ರಿಟಿಷರ ಕೈಗೆ ಸಿಕ್ಕದ ಯಾವುದೇ ನೆಲವೂ ಭಾರತದಲ್ಲಿ ಉಳಿಯಲಿಲ್ಲ. ಮಹರ್ಷಿದಯಾನಂದರು ಕಾರ್ಯರಂಗಕ್ಕೆ ಧುಮುಕಿದಾಗ ನಾವು ೧೮೬೦ನೆಯ ಇಸವಿಯಲ್ಲಿದ್ದೆವು. ಆ ಮಹಾಮಾನವ ವಿಷ-ಪ್ರಾಶನಕ್ಕೀಡಾಗಿ ೧೮೮೩ರಲ್ಲಿ ದಿವಂಗತರಾದರು. ಹೀಗೆ ಅವರಿಗೆ ತಮ್ಮ ಮಹತ್ಕಾರ್ಯವನ್ನು ಸಾಧಿಸಲು ಸಿಕ್ಕಿದುದು ಕೇವಲ ೨೩ ವರ್ಷಗಳು ಮಾತ್ರ.

ಮಹರ್ಷಿ ತಮ್ಮ ಸಮಸ್ತ ಸಾಮರ್ಥ್ಯವನ್ನೂ ಉಪಯೋಗಿಸಿಕೊಂಡು, ಕಾರ್ಯದಲ್ಲಿ ನಿರತರಾಗಿದ್ದಾಗ, ಈಸ್ಟ್ ಇಂಡಿಯಾ ಕಂಪೆನಿಯು ಶಾಸನಾಧಿಕಾರನ್ನು ಕಳೆದುಕೊಂಡು ಸಮ್ರಾಜ್ಞೀ ವಿಕ್ಟೋರಿಯ ಬ್ರಿಟಿಷ್ ಪಾರ್ಲಿಮೆಂಟಿನ ಮೂಲಕ ತಾನೇ ಸೂತ್ರಗಳನ್ನು ಕೈಗೆ ತೆಗೆದುಕೊಂಡಿದ್ದಳು. ಮತ್ತು ಮಹರ್ಷಿಯು ಕಾರ್ಯವಿಸ್ತಾರ ಮಾಡುತ್ತಿದ್ದಾಗ, ಲಾರ್ಡ ಎಲ್ಗಿನ್, ಜಾನ್ ಲಾರೆನ್ಸ್, ಲಾರ್ಡ್ ಮೇಯೋ, ಲಾರ್ಡ್ ನಾರ್ಥ್ ಬ್ರೂಕ್, ಲಾರ್ಡ್ ಲಿಟ್ಟನ್, ಮತ್ತು ಲಾರ್ಡ್ ರಿಪನ್- ಈ ಆರು ಜನರು ಭಾರತದ ವೈಸ್ ರಾಯ್ ಹಾಗೂ ಗವರ್ನರ್ ಜನರಲ್ ಗಳಾಗಿ ರಾಜಭಾರ ನಡೆಸಿದರು.

### ಪರಭಾಷಾಪ್ರಿಯ ಭಾರತೀಯರು ; ತನ್ಮೂಲಕ ಸಾಮಾಜಿಕ ಧಾರ್ಮಿಕ ಅಧಃಪತನ

ಶಾಸಕರ ಭಾಷೆ, ಶಾಸಕರ ಆಚಾರ-ವಿಚಾರಗಳು, ಶಾಸಕರ ಮತ-ಇವುಗಳ ವರ್ಚಸ್ಸು ಶಾಸಿತ ಜನಸಾಮಾನ್ಯರ ಮೇಲೆ ಬೀಳುವುದು ಸಹಜ. ೧೮೨೮ರಿಂದ ೧೮೩೫ರ ವರೆಗೆ ವೈಸ್ ರಾಯ್ -ಹಾಗೂ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ವಿಲಿಯಂ ಬೆಂಟಿಂಕ್ ಉದಾರವೃತ್ತಿಯವನೂ, ಸುಧಾರಕವಾದಿಯೂ ಆದ ಸತ್ಪುರುಷನಾಗಿದ್ದನು. ಅದೇ ಕಾಲದಲ್ಲಿದ್ದ, ಬ್ರಾಹ್ಮಸಮಾಜದ ಸಂಸ್ಥಾಪಕರಾದ ರಾಜಾ ರಾಮಮೋಹನರಾಯರಂತಹ ದೇಶಭಕ್ತರೂ ಕೂಡ "ಸಂಸ್ಕೃತ ಸತ್ತ್ವಹೀನ; ಅದರ ಸಾಹಿತ್ಯ ಅತ್ಯಂತ ಕೆಳದರ್ಜೆಯದು. ಭಾರತೀಯರು ನಿಜವಾಗಿ ಪ್ರಗತಿ ಸಾಧಿಸಬೇಕಾದರೆ, ಸಂಸ್ಕೃತವನ್ನು ಪಕ್ಕಕ್ಕೆ ಸರಿಸಿ, ಆಂಗ್ಲಭಾಷೆಯನ್ನೇ ಎಲ್ಲರಿಗೂ ಕಲಿಸಬೇಕು".-ಎಂಬ ಸಲಹೆಯನ್ನು ಕೊಟ್ಟರೆಂದ ಮೇಲೆ, ಶಾಸಕರ ಭಾಷೆ, ಸಭ್ಯತೆ-ವ್ಯವಹಾರಗಳ ವರ್ಚಸ್ಸು ಜನಸಾಮಾನ್ಯರ ಮೇಲೆ ಬೀಳುವುದರಲ್ಲಿ ಆಶ್ಚರ್ಯವೇನಿದೆ? "ಸಂಪೂರ್ಣ ಭಾರತವನ್ನೇ ಏಸುದೇವನ ಪದತಳಕ್ಕೆ ತಾರದೆ, ಭಾರತೀಯರ ಉದ್ಧಾರ ಮೂರು ಕಾಲಕ್ಕೂ ಅಸಂಭವ"-ಎಂದು ಉಗ್ಗಡಿಸುತ್ತಾ ಬ್ರಿಟಿಷ್ ಹಾಗೂ ಅನ್ಯ ಐರೋಪ್ಯ ಕ್ರೈಸ್ತ ಮಿಶನರಿಗಳ ತಂಡ ಕೈಗಳಲ್ಲಿ ಬೈಬಲನ್ನು ಹಿಡಿದು ಧಾಳಿಯಿಡುತ್ತಿದ್ದಿತು; ಹಿಂದೂ ಧರ್ಮದ ಅವಗುಣಗಳನ್ನು ಮತ್ತು ಕ್ರೈಸ್ತ ಧರ್ಮದ ಶುಭಗುಣಗಳನ್ನು ಮಾತ್ರ ಘೋಷಿಸುತ್ತಾ ಈ ಪಾದರಿಗಳು ಮತಪ್ರಚಾರದಲ್ಲಿ ನಿರತರಾಗಿದ್ದರು. ಕೇರಳ, ಮದರಾಸು, ಹಾಗೂ ಬಂಗಾಳ ಪ್ರಾಂತಗಳಲ್ಲಿ ಈ ಪಾದರಿಗಳಿಗೆ ಅನಿರೀಕ್ಷಿತವೆಂಬಷ್ಟು ಸಾಫಲ್ಯ ಸಿಕ್ಕುತ್ತಿತ್ತು. ಪಾದರಿಗಳ ಯುಕ್ತಿಯುಕ್ತವಾದ ಮಾತುಗಳಿಗೆ ಮಾರು ಹೋಗಿ, ಹಿಂದೂ ಯುವಕರು ಗುಂಪು-ಗುಂಪಾಗಿ ಕ್ರೈಸ್ತರಾಗಿ ಹೋಗುತ್ತಿದ್ದರು. ವೇದೋಪನಿಷತ್ತುಗಳನ್ನಾಗಲಿ, ಷಡ್ದರ್ಶನಗಳನ್ನಾಗಲಿ ಓದುವ ಹಾಗೂ ತಿಳಿದುಕೊಳ್ಳುವ ಶ್ರಮವನ್ನು ಪಾದರಿಗಳು ತೆಗೆದುಕೊಳ್ಳುತ್ತಿರಲಿಲ್ಲ.

### ನಿದ್ರಾವಶರಾದ ಬ್ರಾಹ್ಮಣವರ್ಗ ಹಾಗೂ ಸ್ವಾರ್ಥೀ ಮತಾಚಾರ್ಯರು

ಜನತೆಗೆ ಪಥ-ಪ್ರದರ್ಶನ ಮಾಡಬೇಕಾದ ಬ್ರಾಹ್ಮಣ ವರ್ಗ ಸ್ವತಃ ವೇದಾದಿ ಸತ್ಯಶಾಸ್ತ್ರಗಳ ಪರಿಜ್ಞಾನವನ್ನು ಹೊಂದಿರಲಿಲ್ಲ. ತಮ್ಮ ಧರ್ಮ-ಸಂಸ್ಕೃತಿಗಳ ಮೇಲೆ ಈ ರೀತಿ ಪ್ರಚಂಡ ಪ್ರಹಾರವಾಗುತ್ತಿದ್ದರೂ ಕೂಡ, ಹಿಂದೂಗಳ ಧಾರ್ಮಿಕ-ನಾಯಕರುಗಳು "ನಾಮ ಒಂದಿರಬೇಕೋ, ಮೂರಿರಬೇಕೋ? ವಿಭೂತಿ ಬಳಿದವರು ಮುಕ್ತರಾಗುತ್ತಾರೋ ಅಥವಾ ಅಡ್ಡಗಂಧವಿಡುವವರು ಮುಕ್ತರಾಗುತ್ತಾರೋ? ಶಿವ ದೊಡ್ಡವನೋ, ವಿಷ್ಣು ದೊಡ್ಡವನೋ? ಪುಣ್ಯಾತ್ಮರು ತೆರಳುವುದು ಕೈಲಾಸಕ್ಕೋ, ವೈಕುಂಠಕ್ಕೋ?"-ಎಂಬ .ಈ ಗಂಭೀರ ಪ್ರಶ್ನೆಗಳನ್ನು ಹಿಡಿದು ಗುದ್ದಾಡುತ್ತಿದ್ದರು. ವೇದೋಕ್ತವಾದ ಏಕೇಶ್ವರ ನಿರಾಕಾರೇಶ್ವರವಾದವನ್ನು ಬದಿಗೊತ್ತಿ, ಪುರಾಣೋಕ್ತವಾದ ನೂರಾರು ದೇವೀದೇವತೆಯರ ಇರುವಿಕೆಯನ್ನೂ, ಅವರ ಸಾಕಾರತ್ವವನ್ನೂ, ಅವತಾರವಾದದವನ್ನೂ ಗ್ರಹಿಸಿ, ಹಿಂದೂ ಜನಾಂಗ ನೂರು-ನೂರು ಸಾವಿರ-ಸಾವಿರ ಮತ-ಮತಾಂತರಗಳಲ್ಲಿ ಛಿನ್ನ-ಭಿನ್ನವಾಗಿ ಹರಿದು ಹಂಚಿಹೋಗಿದ್ದಿತು. ಬುದ್ಧಿಶೋಧ-ಕರ್ಮಶೋಧದ ಪ್ರೇರಣೆಗಾಗಿ ದೇವದೇವನಲ್ಲಿ ಮೊರೆಯಿಡುವ ಗಾಯತ್ರಿಯ ಉಪದೇಶ ಶೂನ್ಯ-ವಿಲೀನವಾಗಿ, ಜಾತಿಗೊಂದು, ನೀತಿಗೊಂದು, ಬಣ್ಣಕ್ಕೊಂದು, ನಾಡಿಗೊಂದು ಸಾಂಪ್ರದಾಯಿಕ ಗುರುಮಂತ್ರಗಳು ರೂಪಿಸಲ್ಪಟ್ಟು ಐಕಮತ್ಯ ಅತೀತದ ವಿಶಾಲಗರ್ಭದ ಅದಾವುದೋ ಗಾಢಾಂಧಕಾರ ಕವಿದ ಮೂಲೆಯಲ್ಲಿ ಬಿದ್ದಿದ್ದಿತು. ವೇದೋಕ್ತ ಯಜ್ಞದ ರೂಪವನ್ನು ಕೆಡಿಸಿ, ಘೃಣಾಸ್ಪದವಾದ ಪಶುಹಿಂಸೆ ತನ್ನ ರಾಕ್ಷಸ ನೃತ್ಯವನ್ನು ಅವ್ಯಾಹತವಾಗಿ ನಡೆಯಿಸಿಂದು ಹೋಗುತ್ತಿತ್ತು. ವೇದೋಕ್ತವೂ, ಪರಮವೈಜ್ಞಾನಿಕವೂ, ಸರ್ವಮಾನವೋತ್ಥಾನಕಾರಕವೂ ಆದ ಚಾತುರ್ವರ್ಣ ವ್ಯವಸ್ಥೆಯ ರೂಪವನ್ನೇ ಕೆಡಿಸಿ, ಜನ್ಮಮೂಲಕವಾದ ಹಾಗೂ ಮಾನವದ್ರೋಹಕರವಾದ ಜಾತಿಪದ್ಧತಿಯನ್ನು ದೃಢಪಡಿಸಿ, ಮೇಲು-ಕೀಳು-ಎಂಬ ಅಸುರೀ ಭಾವನೆಯನ್ನು ಬಿತ್ತರಿಸಿ, ಸಂಪ್ರದಾಯಗಳ ಗುರುಗಳೂ, ಗದ್ದುಗೆಗೆ ಅಂಟಿಕೊಂಡ ಮಹಂತರೂ, ಮಠಾಧೀಶರೂ ಮಾನವತ್ವದ ಮುಖಕ್ಕೆ ಮಸಿ ಮೆತ್ತಿದ್ದರು. ಮುಸ್ಲಿಂ ಮೌಲವಿಗಳೂ, ಕ್ರೈಸ್ತಪಾದರಿಗಳೂ ತಮ್ಮ ಯುಕ್ತಿಯುಕ್ತವಾದ ತರ್ಕದಿಂದಲೂ, ಭೌತಿಕ ಸುಖಗಳ ಪ್ರಲೋಭನದಿಂದಲೂ ಹಿಂದೂ ಯುವನಕರನ್ನು ತಮ್ಮ ಮತಗಳಿಗೆ ಸೇರಿಸಿಕೊಳ್ಳುತ್ತಿದ್ದರೂ ಕೂಡ, ಈ ಪಂಡಿತಂಮನ್ಯರು ತಮ್ಮ ಪ್ರಾಚೀನ ಆರ್ಷೇಯ ಧರ್ಮದ ರಕ್ಷಣೆಯ ಬಗೆಗೆ ಚಿಂತಿಸುವುದಂತಿರಲಿ; "ವಿದೇಶಕ್ಕೆ ಹೋಗಿ ಬಂದವರಿಗೆ ಯಾವ ಪ್ರಾಯಶ್ಚಿತ್ತ ವಿಧಿಸಬೇಕು? ಅನ್ಯಮತೀಯರೊಂದಿಗೆ ಉಂಡವರಿಗೆ-ಕುಡಿದವರಿಗೆ ಯಾವ ರೀತಿ ಬಹಿಷ್ಕಾರ ಹಾಕಬೇಕು? ದ್ವಿಜರಲ್ಲದವರು ವೇದಶ್ರವಣ-ವೇದೋಚ್ಚಾರಣ-ವೇದಚಿಂತನ-ವೇದಧರ್ಮಾನುಷ್ಠಾನ ಮಾಡಿದರೆ, ಅವರಿಗೆಂತಹ ಬಹಿಷ್ಕಾರ ಹಾಕಬೇಕು?"- ಎಂಬ ಕೂಟಪ್ರಶ್ನೆಗಳಿಗೆ ಉತ್ತರ ಹುಡುಕುತ್ತಿದ್ದರೇ ಹೊರತು, "ದಿನದಿನಕ್ಕೆ ಸಂಖ್ಯಾಬಲವನ್ನು ಕಳೆದುಕೊಳ್ಳುತ್ತಿರುವ ವೈದಿಕಧರ್ಮವನ್ನು ಹೇಗೆ ರಕ್ಷಿಸಬೇಕು?" ಎಂದು ಯೋಚಿಸುವ ಗೋಜಿಗೇ ಹೋಗುತ್ತಿರಲಿಲ್ಲ!

## ದಾಸ್ಯಕ್ಕೆ ಕಾರಣವಾದ ಆಂಗ್ಲ ಭಾಷೆಯ ಉತ್ಥಾನ

ಈ ನಿರಾಶಾಜನಕಸ್ಥಿತಿಗೆ ಮತ್ತಷ್ಟು ಬೆಂಬಲಕೊಡಲು, ಬ್ರಿಟಿಶ್ ಸರಕಾರ ತನ್ನ ಶಿಕ್ಷಣ ವ್ಯವಸ್ಥೆಯನ್ನೂ ತಮಗೆ ಅನುಕೂಲವಾಗುವಂತೆ ರೂಪಿಸಿಕೊಂಡಿತು. ಭಾರತದಲ್ಲಿ ಎಂತಹ ಶಿಕ್ಷಣ ಪ್ರಸಾರಮಾಡಲ್ಪಡಬೇಕೆಂಬುದನ್ನು ನಿರ್ಣಯಿಸಲು ನೇಮಿಸಲ್ಪಟ್ಟ ಶಿಕ್ಷಣ-ತಜ್ಞ ಲಾರ್ಡ್ ಮೆಕಾಲೇ, ಇಂಗ್ಲೆಂಡಿನಲ್ಲಿದ್ದ ತನ್ನ ತಂದೆಗೆ ಪತ್ರ ಬರೆಯುತ್ತಾ, ಅತಿಗರ್ವದಿಂದ-"ನಾನೀಗ ರೂಪಿಸಿರುವ ಪದ್ಧತಿಯಂತೆ ಶಿಕ್ಷಣ ಕೊಡಲ್ಪಟ್ಟರೆ, ಇನ್ನು ೩೦ ವರ್ಷಗಳ ನಂತರ ಬಂಗಳಾದಲ್ಲಿ ಒಬ್ಬನೇ ಒಬ್ಬ ಮೂರ್ತಿಪೂಜಕನೂ ಸಿಕ್ಕಲಾರನು. ಮೈ ಬಣ್ಣದಿಂದ ಕಪ್ಪಗಿದ್ದರೂ, ಬುದ್ಧಿ, ಭಾವನೆ ಹಾಗೂ ನಡೆನುಡಿಗಳಿಂದ ಎಲ್ಲರೂ ಆಂಗ್ಲರೇ ಆಗಿರುತ್ತಾರೆ".- ಎಂದು ಬರೆದಿದ್ದನು. ಮಹರ್ಷಿ ದಯಾನಂದಸರಸ್ವತಿಗಳು ಸಂಗ್ರಾಮರಂಗಕ್ಕೆ ಧುಮುಕಿದಾಗ, ಮೆಕಾಲೆಯ ಉದ್ಗಾರ ಸತ್ಯವೇ ಆಗುವಂತೆ ತೋರುತ್ತಿದ್ದಿತು. ಮತಾಧೀಶರು-ಮಠಾಧೀಶರು ಕಣ್ಣುಗಳನ್ನು ತೆರೆಯುವ ಲಕ್ಷಣಗಳೇ ಕಾಣುತ್ತಿರಲಿಲ್ಲ.

## ದಿವ್ಯದರ್ಶೀ ದಯಾನಂದರು

ಮಹರ್ಷಿಗಳು ಕೇವಲ ಶಾಸ್ತ್ರಜ್ಞರು ಹಾಗೂ ತಾರ್ಕಿಕರು ಮಾತ್ರವಲ್ಲ; ಮಹಾನ್ ಮನೋವೈಜ್ಞಾನಿಕರೂ ಆಗಿದ್ದರು. ಆಂಗ್ಲರು ಭಾರತೀಯರಿಗೆ ಓದಿಸುತ್ತಿದ್ದ ಭಾರತದ ಪ್ರಾಚೀನ ಚರಿತ್ರೆ ವಿದ್ಯಾರ್ಥಿಗಳ ಹೃದಯಗಳಲ್ಲಿ ತಮ್ಮ ಪೂರ್ವಜರ ಬಗೆಗೆ ಕೇವಲ ಬೇಸರ ಹುಟ್ಟಿಸುವಂತಹುದಾಗಿದ್ದಿತು. "ನಿಮ್ಮ ಪೂರ್ವಜರು ಪೂರ್ಣತಃ ಕಾಡಾಡಿಗಳು; ಅಸಭ್ಯರು; ಅಸಂಸ್ಕೃತರು. ನಿಮ್ಮ ಅತೀತ ಅವಿದ್ಯಾಂಧಕಾರದ ನೆಲೆವೀಡು. ನಿಮ್ಮವರ ಚರಿತ್ರೆ ಬರಿಯ ಸೋಲುಗಳ ಕಂತೆ; ಅಜ್ಞಾನಿಗಳ ಸಂತೆ; ನಿಮ್ಮವರ ಸಂಸ್ಕೃತಿ ಬರಿದೊಂದು ಸೊನ್ನೆ. ನಿಮ್ಮ ಪೂರ್ವಜರು ಕಲ್ಲು-ಮಣ್ಣು-ನೀರು-ಮರಗಿಡಗಳನ್ನು ಪೂಜಿಸುವ ಬುದ್ಧಿಹೀನ ತಿಳಿಗೇಡಿಗಳು. ದೇವರು, ಧರ್ಮ, ಆತ್ಮ-ಯಾವುದರ ಅರಿವೂ ಅವರಿಗಿರಲಿಲ್ಲ".- ಎಂದು ನಮ್ಮ ಮಕ್ಕಳಿಗೆ ಕಲಿಸುತ್ತಿದ್ದರು. ನಮ್ಮವರು ಅದನ್ನು ಒಪ್ಪಿಕೊಂಡುಬಿಡುತ್ತಲೂ ಇದ್ದರು. "**ಯಾವ ರಾಷ್ಟ್ರಕ್ಕೆ ತನ್ನ ಪೂರ್ವಜರ ಬಗೆಗೆ, ಪೂರ್ವಜರ ಧರ್ಮದ ಹಾಗೂ ಪೂರ್ವಜರ ಇತಿಹಾಸದ ಬಗೆಗೆ ಅಭಿಮಾನವಿಲ್ಲವೋ, ಆ ರಾಷ್ಟ್ರ ಆತ್ಮಾಭಿಮಾನದಿಂದ ತಲೆಯೆತ್ತಿ ನಿಲ್ಲಲಾರದು**"- ಎಂಬ ಮನೋವೈಜ್ಞಾನಿಕ ಸತ್ಯವನ್ನು ಎಲ್ಲರಿಗಿಂತ ಮುನ್ನ ಮಹರ್ಷಿ ದಯಾನಂದರು ಕಂಡುಕೊಂಡರು. "ಭಾರತೀಯರೇ! ಸಿಂಹದ ಹಲ್ಲುಗಳನ್ನೆಣಿಸುವ ಭರತನಂತಹ, ಆರು ಜನ ಮಹಾರಥರೊಂದಿಗೆ ಏಕಾಕಿಯಾಗಿಯೇ ಹೋರಾಡಿದ ಅಭಿಮನ್ಯುವಿನಂತಹ ವೀರ-ಕುಮಾರರಿಗೆ ಜನ್ಮವಿತ್ತ ಭಾರತಾಂಬೆ ಬಂಜೆಯಲ್ಲ. ಶ್ರೀರಾಮನಂತಹ ಮರ್ಯಾದಾ ಪುರುಷೋತ್ತಮನನ್ನು, ಶ್ರೀಕೃಷ್ಣನಂತಹ ಮಹಾಯೋಗೇಶ್ವರನನ್ನು ಹೆತ್ತ ಹೆಮ್ಮೆ ಭಾರತಕ್ಕಲ್ಲದೆ ಬೇರಾವ ದೇಶಕ್ಕೂ ಸಿಕ್ಕಿಲ್ಲ. ನಿಮ್ಮ ಇತಿಹಾಸ ಸೋಲುಗಳ ಕತೆಯಲ್ಲ; ಶಾಶ್ವತ ವಿಜಯದ, ಮಾನವತ್ವದ ಉಜ್ಜ್ವಲ ಮಹಾಜಯದ ಗಗನಸ್ಪರ್ಶೀ ಮಹದುದ್ಗಾರ-ಎಂಬುದನ್ನು ನೆನಪಿಡಿ. ಸಂಪೂರ್ಣ ವಿಶ್ವಕ್ಕೇ ಆಧ್ಯಾತ್ಮಜ್ಞಾನದ ಸುಧಾಪಾನಮಾಡಿಸಿದ ಪುಣ್ಯಭೂಮಿ ಈ ನಿಮ್ಮ ಭಾರತ! ನಿಮ್ಮ ವೇದಗಳಿಗೆ, ನಿಮ್ಮ ಉಪನಿಷತ್ತುಗಳಿಗೆ ಸರಿತೂಗುವ ಸತ್ಯಶಾಸ್ತ್ರವನ್ನು ಮಾನವನ ಕೈಗಿಡುವ ಮಹಾಭಾಗ್ಯ ಈ ನಿಮ್ಮ ಪುಣ್ಯಭೂಮಿಗಲ್ಲದೆ ಮತ್ತಾವ ದೇಶಕ್ಕಿದೆ? ಆದಕಾರಣ, ನನ್ನ ಪ್ರಿಯ ಬಂಧುಗಳೇ! ನೀವು ಪರರ ಮುಂದೆ ಅಪಮಾನದಿಂದ ತಲೆತಗ್ಗಿಸಿ ನಿಲ್ಲಬೇಕಾದ ಪರಿಸ್ಥಿತಿ ಇಲ್ಲ. ಅಭಿಮಾನದಿಂದ ಎದೆ ಸೆಟೆದು ನಿಲ್ಲಿರಿ. ವೇದಗಳನ್ನು ಹಿಡಿದು ನಿಮ್ಮ ಪೂರ್ವಜರು ಜಗತ್ತಿಗೇ ಗುರುಗಳಾಗಿ ವಿರಾಜಿಸಿದರು. ನೀವೂ ಅದೇ ವೇದಗಳನ್ನು ಹಿಡಿದು ನೀವೂ ಮತ್ತೆ ಜಗದ್ಗುರುಗಳಾದೀರಿ".- ಎಂದು ಮೇಘ ಗಂಭೀರಸ್ವರದಿಂದ ಗುಡುಗಿದರು ಮಹರ್ಷಿ ದಯಾನಂದಸರಸ್ವತೀ.

## ಸುಪ್ತಭಾರತವನ್ನು ಎಚ್ಚರಿಸಿದ ಆರ್ಯಸಮಾಜದ ಸ್ಥಾಪನೆ

ಕೇವಲ ವೇದ ಸಂಹಿತೆಗಳನ್ನು ಈಶ್ವರೋಕ್ತ ಶಾಸ್ತ್ರವೆಂದು ಗ್ರಹಿಸದೆ, ಪರಿಶುದ್ಧ ಮಾನವಧರ್ಮವನ್ನು ಪ್ರಸರಿಸಲು ಸಾಧ್ಯವಿಲ್ಲವೆಂದು ಕಂಡುಕೊಂಡ ಮಹರ್ಷಿಪ್ರವರರು, ವೇದವಿರುದ್ಧವಾದ ಪುರಾಣಗಳಿಗೆ ಹಾಗೂ ಸ್ಮೃತಿಗಳಿಗೆ ತಿಲಾಂಜಲಿ ಕೊಡದೆ ಗತ್ಯಂತರವಿಲ್ಲವೆಂಬುದನ್ನೂ ಸಹಜವಾಗಿಯೇ ಅರಿತರು.

"ನಾನು ಯಾವುದೇ ನವೀನ ಮತವನ್ನೂ ಸ್ಥಾಪಿಸಲು ಬಂದವನಲ್ಲ. ಸರ್ವಜೀವರ ಸರ್ವವಿಧ ಸಮುತ್ಥಾನಕ್ಕೆ ಸರ್ವದಾ, ಸರ್ವಥಾ, ಸರ್ವತ್ರ ಕಾರಣಭೂತವಾದ ಅನಾದಿನಿಧನಾ ನಿತ್ಯಾ ವೇದವಾಣಿಯ ಪ್ರಸರಣದಿಂದ ಮಾತ್ರ ಸಮಸ್ತ ಲೋಪ-ದೋಷಗಳೂ ನಿವೃತ್ತವಾಗಿ, ಸರ್ವವಿಧದ ಸುಧಾರಣೆಯೂ ಸಿದ್ಧಿಸುವುದು. ಆದುದರಿಂದ, ವೇದಗಳಿಗೆ ಅಭಿಮುಖರಾಗಿ ನಡೆಯಿರಿ".- ಎಂದವರು ಕರೆಯಿತ್ತರು. ವೇದಪ್ರಚಾರಕ್ಕೆ ಬ್ರಾಹ್ಮಸಮಾಜ ನೆರವಾದೀತೇನೋ-ಎಂಬ ಅಭಿಲಾಷೆ ಹೊತ್ತು, ಕಲ್ಕತ್ತೆಯಲ್ಲಿ ಬಾಬೂ ಕೇಶವಚಂದ್ರಸೇನರನ್ನು, ಬೋಲ್‌ಪುರದಲ್ಲಿ ಮಹರ್ಷಿದೇವೇಂದ್ರನಾಥ ಠಾಕುರರನ್ನು ಮತ್ತು ಪೂನಾದಲ್ಲಿ ಮಹಾದೇವಗೋವಿಂದ ರಾನಡೆಯವರನ್ನು ಸಂಧಿಸಿದರು. ಆದರೆ, ಆಂಗ್ಲಭಾಷಾಮೋಹದಿಂದ, ಪಾಶ್ಚಾತ್ಯಸಭ್ಯತಾ ಪ್ರವಾಹದಿಂದ ಪ್ರಭಾವಿತರಾದ ಆ ಭದ್ರಪುರುಷರು ವೇದಗಳ ಗಂಭೀರವಾದ ಕರೆಗೆ ಕಿವಿಕೊಡಲಿಲ್ಲ. ಪರಿಣಾಮತಃ, ಮಹರ್ಷಿಗಳು ವೇದ ಪ್ರಚಾರಕ್ಕಾಗಿ "ಆರ್ಯಸಮಾಜ"ವನ್ನು ೧೮೭೫ರಲ್ಲಿ ಬೊಂಬಾಯಿ ನಗರದಲ್ಲಿ ಸ್ಥಾಪಿಸಬೇಕಾಯಿತು.

## ವೇದಧರ್ಮದ ಪುನರುತ್ಥಾನದಿಂದಲೇ ಸಂಗಠನ ಸಾಧ್ಯ

ಪೂರ್ಣತಃ ನಿಃಸ್ವಾರ್ಥರಾದ, ಭೌತಿಕದೃಷ್ಟಿಯಿಂದ ಸರ್ವಥಾ ಅಕಿಂಚನರಾದ ಮಹರ್ಷಿದಯಾನಂದರಿಗೆ ತಮ್ಮದೇ ಆದ ಸ್ವಾರ್ಥವೇನೂ ಇರಲಿಲ್ಲ. ಅನೇಕೇಶ್ವರವಾದ, ಸಾಕಾರೇಶ್ವರವಾದ ಅವತಾರವಾದ, ಮೂರ್ತಿಪೂಜೆ, ಜನ್ಮಮೂಲಕವಾದ ಜಾತಿಪದ್ಧತಿ, ಉಚ್ಚ-ನೀಚ ಭಾವನೆ, ಹಿಂಸಾಮಯಯಜ್ಞ, ಬಾಲವಿವಾಹ, ವೃದ್ಧವಿವಾಹ-ಮೊದಲಾದ ಅಪಸಿದ್ಧಾಂತಗಳನ್ನು ಎತ್ತಿತೋರಿಸುವಾಗ, ಅವರ ಹೃದಯದಲ್ಲಿ ಸರ್ವಮಾನವಕಲ್ಯಾಣದ ಏಕಮಾತ್ರ ದಿವ್ಯಭಾವನೆಯಿದ್ದಿತೇ ಹೊರತು, ರಾಗದ್ವೇಷಗಳ ಮತೀಯ ಆಗ್ರಹದ ಅಥವಾ ಪಕ್ಷಪಾತದ ತಿಲದ ಕೋಟ್ಯಂಶವೂ ಇರಲಿಲ್ಲ. ಸಾರ್ವಕಾಲಿಕ, ಸಾರ್ವಭೌಮ ಮಾನವಧರ್ಮದ ಪ್ರಕಾಶನ ಕಾರ್ಯದಲ್ಲಿ, ಯಾವುದಾದರೂ ಮತದ ಖಂಡನವನ್ನೆಸಗಿದ್ದರೆ, ಅದು ರೈತನು ಬೆಳೆಯ ಸಲುವಾಗಿ ಕಳೆಯನ್ನು ಕಿತ್ತು ಹಾಕುವಂತೆ ಮಾತ್ರ. "ಸತ್ಯಾಸತ್ಯ ನಿರ್ಣಯದ ಸಲುವಾಗಿ ಈ ನನ್ನ ಉದ್ಯಮ".- ಎಂದವರು ಸಾರಿಸಾರಿ ಸಾರಿಹೇಳಿದ್ದಾರೆ. "ವಿವೇಚನಾನಂತರ, ನಿಮಗೆ ಸತ್ಯವೆಂದು ನಿಶ್ಚಿತವಾದುದನ್ನು ಸ್ವೀಕರಿಸಿ; ಅಸತ್ಯವನ್ನು ವರ್ಜಿಸಿರಿ".-ಎಂಬ ವಾಕ್ಯ ಅವರ ಪಲ್ಲವಿಯೇ ಆಗಿತ್ತು.

## ಅಹಿಂಸೆಯ ಪ್ರತೀಕ ಸ್ವಾಮೀ ದಯಾನಂದರು

ಸರ್ವಮಾನವಕಲ್ಯಾಣದ, ಸರ್ವಮಾನವಸಮತಾವಾದದ, ಸದ್ಧರ್ಮಪ್ರಚಾರದ ಈ ಮಹಾಕಾರ್ಯ ಅವರಿಗೆ ಯಾವುದೇ ಸುಖವನ್ನೂ, ಭೌತಿಕ ಸಮೃದ್ಧಿಯನ್ನೂ ತರಲಿಲ್ಲ. ಆದರೆ, ಹಲವಾರು ಸಾರಿ ಅವರ ಮೇಲೆ ಲಾಠೀ-ಕಲ್ಲು-ಇಟ್ಟಿಗೆಗಳ ಪ್ರಹಾರವಾಯಿತು. ಮೂರು ನಾಲ್ಕು ಸಾರಿ ಅವರ ಗುಡಿಸಲಿಗೆ ಬೆಂಕಿಯಿಟ್ಟರು. ಒಂದು ಸಾರಿ ಗಂಗೆಗೆಸೆದುದೂ ಆಯಿತು. ಹದಿಮೂರು ಸಾರಿ ವಿಷಪ್ರಾಶನವೂ ಆಯಿತು. ಆದರೆ, ಆ ಮಹರ್ಷಿ ಯಾರ ಮೇಲೆಯೂ ಕ್ರುದ್ಧರಾಗಲಿಲ್ಲ. ಯಾರನ್ನೂ ದಂಡಿಸಲಿಲ್ಲ. ಬೈದವರಿಗೆ ಆಶೀರ್ವಾದವಿತ್ತರು; ಹೊಡೆದವರಿಗೆ ಶುಭಾಶಯವನ್ನೇ ಕೋರಿದರು. ಒಂದು ಸಾರಿ ವೀಳೆಯದೆಲೆಯಲ್ಲಿ ವಿಷವಿತ್ತ ಬ್ರಾಹ್ಮಣನನ್ನು ಒಬ್ಬ ತಹಸೀಲ್ದಾರನು ಬಂಧಿಸಿದಾಗ-**"ಸೈಯದ್ ಸಾಹೇಬರೇ! ನಾನು ಎಲ್ಲರನ್ನೂ ಬಂಧನಮುಕ್ತರನ್ನಾಗಿಮಾಡಲು ಬಂದಿದ್ದೇನೆ; ಯಾರನ್ನೂ ಬಂಧಿಸಲಿಕ್ಕಲ್ಲ!"**-ಎಂದು ಅವನನ್ನು ಬಿಡಿಸಿಬಿಟ್ಟರು. ಕೊಟ್ಟಕೊನೆಗೆ ಜೋಧಪುರದಲ್ಲಿ ಅವರ ಅಡುಗೆಯ ಭಟ್ಟ ಧೌಡಮಿಶ್ರನು (ಜಗನ್ನಾಥ) ಹಾಲಿನಲ್ಲಿ ಹಾಲಾಹಲ ವಿಷವಿತ್ತಾಗ, 'ಛಿ!' ಎನ್ನಲಿಲ್ಲ; 'ಹಾಯ್'-ಎನ್ನಲಿಲ್ಲ! "ಧೌಡಮಿಶ್ರರೇ! ತಾವೀ ಕಾರ್ಯಮಾಡಿದುದರಿಂದ -ನನ್ನ ವೇದಭಾಷ್ಯದ ಕಾರ್ಯ ಮುರಿದು ಬಿದ್ದು, ಜಗತ್ತಿಗೆಷ್ಟು ಹಾನಿಯಾಯಿತೆಂದು, ತಾವು ತಿಳಿಯದೇ ಹೋದಿರಿ! ಆಯಿತು. ತೆಗೆದುಕೊಳ್ಳಿರಿ ಈ ಹಣವನ್ನು! ನೇಪಾಳಕ್ಕೆ ಹೋಗಿ ಜೀವ ಉಳಿಸಿಕೊಳ್ಳಿ. ಜೋಧಪುರದ ರಾಜರಿಗೆ ಈ ಸಂಗತಿ ಏನಾದರೂ ತಿಳಿದರೆ, ನಿಮ್ಮ ಕುಲವನ್ನೇ ಒರೆಸಿಹಾಕುವನು"- ಎಂದು ಪ್ರಾಣಾಪಹಾರಿಯ ಪ್ರಾಣವನ್ನೂ ಉಳಿಸಿದರು. ಇಂತಹ ಕರುಣಾವಾರಿಧಿಯ ಮೇಲೆ ಪಕ್ಷಪಾತದ ಅಥವಾ ದ್ವೇಷಾಸೂಯೆಗಳ ಆರೋಪಣೆ ಹೊರೆಸುವುದು ಮಾನವತ್ವಕ್ಕೆಯೇ ಕಳಂಕ ತರುವ ಕೃತ್ಯವಾದೀತು. "ಈಶ್ವರ! ಇದೇ ನಿನ್ನ ಇಚ್ಛೆ. ನಿನ್ನ ಇಚ್ಛೆ ಪೂರ್ವವಾಗಲಿ!"-ಎನ್ನುತ್ತಾ ೧೮೮೩ರ ಅಕ್ಟೋಬರ್ ೩೦ರಂದು ಸಂಜೆ ಐದು ಘಂಟೆಗೆ ಅಜಮೇರ್ ನಗರದ 'ಭಿನಾಯಿ ಭವನ'ದಲ್ಲಿ ಕಳೇವರವನ್ನು ಕಳಚಿಹಾಕಿ, ಅಮರರಾದರು ಸಾವನ್ನೇ ಸಾಯಬಡೆಯಲು ಯೌವನದಲ್ಲಿ ಗೃಹತ್ಯಜಿಸಿ ಹೊರಟ ಮಹರ್ಷಿ ದಯಾನಂದಸರಸ್ವತೀ.

ಧಾರ್ಮಿಕ, ಶೈಕ್ಷಣಿಕ, ದಾರ್ಶನಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜನೀತಿಕ ಕ್ಷೇತ್ರಗಳಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ ಕ್ರಾಂತಿಯನ್ನುಂಟು ಮಾಡಿದ ಏಕೈಕ ಅಮರ ಕೃತಿ ಎಂದರೆ, ತಮ್ಮಮಾತೃಭಾಷೆ ಗುಜರಾತಿಯಾದರೂ ಮಹರ್ಷಿ ದಯಾನಂದ ಸರಸ್ವತಿ ಅವರು, ಹಿಂದೀ ಭಾಷೆಯಲ್ಲಿ ೧೮೭೫ರಲ್ಲಿ ರಚಿಸಿದ ಸತ್ಯಾರ್ಥಪ್ರಕಾಶ.

೧೮೭೫ರಲ್ಲಿ ಪ್ರಕಾಶಿತವಾಗಿ ೧೮೮೩ರಲ್ಲಿ ಸಂಶೋಧಿತವಾದ ಈ ಗ್ರಂಥ ವಿಶ್ವದ ಎಲ್ಲ ಭಾಷೆಗಳಲ್ಲೂ ಅನುವಾದಿತವಾಗಿದ್ದು, ಕೋಟ್ಯಾಂತರ ಪ್ರತಿಗಳು ಮಾರಾಟವಾಗಿದ್ದಾಗ್ಯೂ, ಅದರ ಬೇಡಿಕೆ ಇನ್ನೂ ಹೆಚ್ಚುತ್ತಲೇ ಇದೆ.

ಅಂತೆಯೇ ಈ ಅಮರಕೃತಿ ಕನ್ನಡ ಭಾಷೆಯಲ್ಲೂ ತೊಂಬತ್ತನಾಲ್ಕು ವರ್ಷಗಳ ಹಿಂದೆಯೇ ಅನುವಾದವಾಗಿದ್ದು ಅನೇಕ ಸಂಸ್ಕರಣಗಳನ್ನು ಕಂಡಿದೆ. ಮೊಟ್ಟ ಮೊದಲ ಬಾರಿಗೆ ೧೯೦೮ ರಲ್ಲಿ ಶ್ರೀಯುತ ಸುಬ್ರಾವ ಶೇಷಗಿರಿ ಹಾಳಕರ ಅವರು ಹತ್ತು ಸಮುಲ್ಲಾಸಗಳನ್ನು ಅನುವಾದಿಸಿದ್ದು ಬೆಂಗಳೂರಿನ ಡಾ॥ ಧರ್ಮಾರ್ಥಿ ಬಸಪ್ಪ ಅವರು ೧೦೦೦ ಪ್ರತಿಗಳನ್ನು ಪ್ರಕಾಶಿಸಿದರು. ೧೯೧೧ರಲ್ಲಿ ಶ್ರೀಯುತ ಶೇಷಗಿರಿ ಅವರೇ ಅನುವಾದಿಸಿದ್ದು ಹನ್ನೊಂದನೆಯ ಸಮುಲ್ಲಾಸವನ್ನು ಸೇರಿಸಿ, ೨೦೦೦ ಪ್ರತಿಗಳನ್ನು ಡಾ॥ ಧರ್ಮಾರ್ಥಿ ಬಸಪ್ಪ ಅವರೇ ಪ್ರಕಾಶಿಸಿದರು. ನಂತರ ೧೯೩೩ರಲ್ಲಿ ಎರಡನೆಯ ಬಾರಿಗೆ ಹದಿನಾಲ್ಕನೇ ಸಮುಲ್ಲಾಸವನ್ನು ಬಿಟ್ಟು ಉಳಿದ ಹದಿಮೂರು ಸಮುಲ್ಲಾಸಗಳನ್ನು ಬೆಂಗಳೂರಿನ ಶ್ರೀಯುತ ಭಾಸ್ಕರ ಪಂತ ಸುಬ್ಬನರಸಿಂಹ ಶಾಸ್ತ್ರಿಗಳು ಅನುವಾದ ಮಾಡಿದ್ದನ್ನು ಬೆಂಗಳೂರು ಸಿಟಿ ಆರ್ಯಸಮಾಜದವರು ೨೦೦೦ ಪ್ರತಿಗಳನ್ನು ಮುದ್ರಿಸಿ ಪ್ರಕಾಶಿಸಿದರು. ನಂತರ ಮೂರನೇ ಬಾರಿಗೆ ೧೯೫೫ರಲ್ಲಿ ಸತ್ಯಾರ್ಥ ಪ್ರಕಾಶವನ್ನು ಪೂರ್ಣವಾಗಿ ಶ್ರೀಯುತರುಗಳಾದ ಭಾಸ್ಕರ ಪಂತ ಸುಬ್ಬನರಸಿಂಹಶಾಸ್ತ್ರಿ ಮತ್ತು ಮಂಜುನಾಥ ಶಾಸ್ತ್ರಿ, ಸಿದ್ಧಾಂತ ಭೂಷಣ ಅವರುಗಳು ಅನುವಾದಿಸಿದ್ದು ಕರ್ನಾಟಕ ಆರ್ಯ ಪ್ರತಿನಿಧಿ ಸಭೆಯ ಪ್ರತಿನಿಧಿ ಪ್ರಕಾಶನ ಸಮಿತಿಯವರು ೪೦೦೦ ಪ್ರತಿಗಳನ್ನು ಮುದ್ರಿಸಿ ಮೈಸೂರಿನಲ್ಲಿ ಪ್ರಕಾಶಿಸಿದರು.

ಇದರ ನಂತರ ನಾಲ್ಕನೇ ಬಾರಿಗೆ ಆರ್ಯಸಮಾಜದ ಸ್ಥಾಪನಾ ಶತಾಬ್ದಿಯ ಸಂಸ್ಕರಣವಾಗಿ ೧೯೭೪ ರಲ್ಲಿ ಪಂಡಿತ ಸುಧಾಕರ ಚತುರ್ವೇದೀ ಅವರು ಪೂರ್ಣವಾಗಿ ಸಂಶೋಧಿಸಿದ ಅನುವಾದವನ್ನು ಬೆಂಗಳೂರು ಆರ್ಯಸಮಾಜದ ವೈದಿಕ ಧರ್ಮ ಪ್ರಕಾಶನ ಸಮಿತಿಯವರು ೯೦೦ ಪುಟಗಳಿಂದೊಡಗೂಡಿದ ೫೦೦೦ ಪ್ರತಿಗಳನ್ನು ಮುದ್ರಿಸಿ ಪ್ರಕಾಶ ಪಡಿಸಿದರು.

ನಾಲ್ಕನೇ ಬಾರಿಗೆ ಪ್ರಕಟವಾದ ೫೦೦೦ ಪ್ರತಿಗಳೂ ಮಾರಾಟವಾಗಿ ಪ್ರತಿಗಳು ಓದುಗರಿಗೆ ದುರ್ಲಭವಾದ ಕಾರಣ ಪಂಡಿತ ಸುಧಾಕರ ಚತುರ್ವೇದೀ ಅವರು ಭಾಷಾಂತರಿಸಿದ್ದ ಕೃತಿಯನ್ನು ೧೯೮೯ರಲ್ಲಿ ಪೂರ್ಣವಾಗಿ ಸಂಸ್ಕರಿಸಿ, ಹರಿಯಾಣಾದ ಬಹಾಲ್‌ಗಡ್ (ಸೋನೀಪತ್) ನ ರಾಮಲಾಲ್ ಕಪೂರ್ ಟ್ರಸ್ಟಿನವರು ಪ್ರಕಾಶಿಸಿದ್ದ ರಾಜಸಂಸ್ಕರಣ ಗ್ರಂಥವನ್ನು ಆಧಾರವಾಗಿಟ್ಟುಕೊಂಡು ಐದನೇ ಬಾರಿಗೆ ಶ್ರೀಯುತ ಉಪೇಂದ್ರ ಭೂಪಾಲ್ ಅವರ ಸಂಪಾದಕತ್ವದಲ್ಲಿ ತಯಾರಾದ ಗ್ರಂಥವನ್ನು ಬೆಂಗಳೂರು ವಿಶ್ವೇಶ್ವರಪುರಂ ಆರ್ಯಸಮಾಜದ ಸತ್ಯಾರ್ಥಪ್ರಕಾಶ ಪ್ರಕಾಶನ ಸಮಿತಿಯವರು ಆರ್ಯಸಮಾಜ ಶ್ರದ್ಧಾನಂದ ಭವನ ವಜ್ರಮಹೋತ್ಸವ ಸಂಸ್ಕರಣ ಕೃತಿಯನ್ನಾಗಿ ೧೨೦೦ ಪುಟಗಳನ್ನೊಳಗೊಂಡ ಎರಡು ಖಂಡಗಳ ೩೦೦೦ ಪ್ರತಿಗಳನ್ನು ಮುದ್ರಿಸಿ ಪ್ರಕಟಿಸಿದರು.

ಈ ಪ್ರತಿಗಳೂ ಸಹ ಮಾರಾಟವಾಗಿ ಪ್ರತಿಗಳು ಅಲಭ್ಯವಾದ ಕಾರಣ ಬೆಂಗಳೂರಿನ ವಿಶ್ವೇಶ್ವರಪುರಂ ಆರ್ಯಸಮಾಜ ಪಂಡಿತ ಸುಧಾಕರ ಚತುರ್ವೇದೀ ಅವರು ಭಾಷಾಂತರಿಸಿ ೧೯೭೪ರಲ್ಲಿ ಪ್ರಕಟವಾದ ಗ್ರಂಥವನ್ನೇ ಆಧಾರವಾಗಿಟ್ಟು ಆರನೇ ಬಾರಿಗೆ ೫೦೦೦ ಪ್ರತಿಗಳನ್ನು ಮುದ್ರಿಸಿ ಪ್ರಕಾಶಿಸಲಾಗುತ್ತಿದ್ದು ಪ್ರಿಯ ಓದುಗರ ಕೈಗಿಡುತ್ತಿದ್ದೇವೆ. ಪ್ರಿಯ ಓದುಗರು ಸ್ವೀಕರಿಸುವಿರಾಗಿ ಭಾವಿಸಿದ್ದೇವೆ.

ಈ ಸಂಸ್ಕರಣವನ್ನು ಬೆಂಗಳೂರು ವಿಶ್ವೇಶ್ವರಪುರಂ ಆರ್ಯಸಮಾಜದಲ್ಲಿರುವ ವೇದಭಾಷ್ಯ ಪ್ರಕಾಶನ ಸಮಿತಿಯವರು ಮುದ್ರಣಕಾರ್ಯವನ್ನು ಕೈಗೊಂಡಿದ್ದು ಪ್ರಕಟಣೆಯಲ್ಲಿ ನೆರವಾದ ಪ್ರತಿಯೊಬ್ಬರಿಗೂ ಆರ್ಯಸಮಾಜ ಧನ್ಯವಾದವನ್ನರ್ಪಿಸುತ್ತದೆ.

ಈ ಗ್ರಂಥವನ್ನು ತಯಾರಿಸುವಲ್ಲಿ ಮುದ್ರಣದೋಷದಿಂದ ಕೆಲವು ತಪ್ಪುಗಳು ಉಳಿದಿದ್ದು ಅದರ ತಪ್ಪು ಒಪ್ಪೋಲೆಯನ್ನು ಪುಸ್ತಕದ ಕೊನೆಯಲ್ಲಿ ಕೊಡಲಾಗಿದೆ. ಅವುಗಳನ್ನು ಓದುಗರು ತಿದ್ದಿಕೊಂಡು ಓದಬೇಕೆಂದು ಪ್ರಕಾಶಕರ ವಿನಂತಿ.

**ಎಸ್.ಆರ್.ಬಾಲಾಜಿ**
ಕೋಶಾಧ್ಯಕ್ಷರು

**ಬಿ.ವಿ.ಯತಿರಾಜ್**
ಕಾರ್ಯದರ್ಶಿಗಳು

**ಹೆಚ್.ಬಿ.ರೆಡ್ಡಪ್ಪ**
ಅಧ್ಯಕ್ಷರು

## ಓದುಗರಿಗೆ ವಿಶೇಷ ಸೂಚನೆ.

೧. ಪ್ರಾಕ್ಕಥನವನ್ನು ಮೊದಲಾಗಿ ಓದಿ ತಿಳಿಯಿರಿ.

೨. ಎರಡನೆಯದಾಗಿ ಋಷಿ ಭೂಮಿಕೆಯ ಅಧ್ಯಯನ ಮಾಡಿರಿ.

೩. ಗ್ರಂಥದ ಕೊನೆಯ ಭಾಗದ ಸ್ವಮಂತವ್ಯಾಮಂತವ್ಯಗಳನ್ನು ಪೂರ್ಣಮನನ ಮಾಡಿಕೊಳ್ಳಿರಿ.

೪. ಅನಂತರ ಪ್ರಥಮ ಸಮುಲ್ಲಾಸದಿಂದ ದಶಮ ಸಮುಲ್ಲಾಸಗಳವರೆಗೆ ಹಂತಹಂತವಾಗಿ, ಗಮನವಿಟ್ಟು ಓದಿರಿ.

೫. ಕೊನೆಯದಾಗಿ, ಏಕಾದಶ ಸಮುಲ್ಲಾಸದಿಂದ ಚತುರ್ದಶ ಸಮುಲ್ಲಾಸಗಳವರೆಗೆ ವಿಮರ್ಶಾತ್ಮಕ ದೃಷ್ಟಿಯಿಂದ ಓದಿರಿ.

೬. ಈ ರೀತಿ ಮುಂದುವರಿದರೆ ಗ್ರಂಥದ ಪೂರ್ಣ ಅರಿವಾಗುವುದು.

# ವಿಷಯಾನುಕ್ರಮಣಿಕೆ


ಋಷಿಭೂಮಿಕಾ

**ಪ್ರಥಮ ಸಮುಲ್ಲಾಸ**

೧. ಪರಮಾತ್ಮನ ಹೆಸರುಗಳು ೧
೨. ಮಂಗಳಾಚರಣ ಸಮೀಕ್ಷಾ ೧೬

**ದ್ವಿತೀಯ ಸಮುಲ್ಲಾಸ**

೧. ಬಾಲಶಿಕ್ಷಾ ಪ್ರಣಾಳಿಕೆ ೧೮
೨. ಭೂತ-ಪ್ರೇತ ವಿವೇಚನೆ ೧೯
೩. ಜಾತಕ-ಗ್ರಹ-ವಿಮರ್ಶೆ ೨೧
೪. ಗುರೂಪದೇಶ ೨೩

**ತೃತೀಯ ಸಮುಲ್ಲಾಸ**

೧. ಅಧ್ಯಯನ-ಅಧ್ಯಾಪನ ವಿಧಾನ ೨೫
೨. ಗುರುಮಂತ್ರ ವ್ಯಾಖ್ಯಾನ ೨೬
೩. ಪ್ರಾಣಾಯಾಮ-ಮಹಿಮೆ ೨೭
೪. ಯಜ್ಞ-ಸಂಧ್ಯೋಪಾಸನಾ ಕ್ರಮ ೨೮
೫. ಉಪನಯನ ವಿಧಿ ೩೦
೬. ಬ್ರಹ್ಮಚರ್ಯಾಶ್ರಮ ಸ್ವರೂಪ ೩೧
೭. ಪಂಚವಿಧಪರೀಕ್ಷಣ ೩೯
೮. ದ್ರವ್ಯ-ಗುಣಾದಿ ವಿವರಣ ೪೧
೯. ಪಠನ-ಪಾಠನ ವಿಧಿ ೪೮
೧೦. ಶಾಸ್ತ್ರ-ಪ್ರಾಮಾಣ್ಯಾಪ್ರಾಮಾಣ್ಯ ೫೧
೧೧. ಸ್ತ್ರೀ-ಶೂದ್ರ-ವೇದಾಧಿಕಾರ ೫೪

**ಚತುರ್ಥ ಸಮುಲ್ಲಾಸ**

೧. ಸಮಾವರ್ತನ ವಿಷಯ ೫೮
೨. ಬಾಲವಿವಾಹ ನಿಷೇಧ ೫೮
೩. ಗುಣಕರ್ಮಸ್ವಭಾವಾನುಸಾರ ವರ್ಣವ್ಯವಸ್ಥೆ ೬೪
೪. ವಿವಾಹ ಭೇದಗಳು ೬೯
೫. ಗರ್ಭ-ಧಾರಣ-ಸಂವರ್ಧನ ವಿಧಿ ೭೦
೬. ಪುಂಸವನ-ಸೀಮಂತೋನ್ನಯನ ವಿಧಿ ೭೧
೭. ಪಂಚಮಹಾಯಜ್ಞಗಳು ೭೪
೮. ಪಾಷಂಡಿಗಳ ಲಕ್ಷಣಗಳು ೮೦
೯. ಗೃಹಸ್ಥಧರ್ಮ ವಿವರಣ ೮೨
೧೦. ಅಧ್ಯಾಪಕ-ಅಧ್ಯಾಪಿಕಾ ಲಕ್ಷಣಗಳು ೮೪
೧೧. ಮೂರ್ಖ ಲಕ್ಷಣಗಳು ೮೫
೧೨. ವಿದ್ಯಾರ್ಥಿ ಲಕ್ಷಣಗಳು ೮೬
೧೩. ಆಪದ್ಧರ್ಮವಾದ ನಿಯೋಗ ೮೯
೧೪. ಪಾರಾಶರ ಸ್ಮೃತಿ ವಿಶ್ಲೇಷಣ ೯೪
೧೫. ಗೃಹಸ್ಥಾಶ್ರಮ ಶ್ರೇಷ್ಠತ್ವ ೯೫

**ಪಂಚಮ ಸಮುಲ್ಲಾಸ**

೧. ವಾನಪ್ರಸ್ಥವಿಧಿ ೯೭
೨. ಸಂನ್ಯಾಸವಿಧಿ ೯೮

**ಷಷ್ಠ ಸಮುಲ್ಲಾಸ (ರಾಜನೀತಿ ಪ್ರಕರಣ)**

೧. ರಾಜಸಭಾತ್ರಯ ವಿವರಣ ೧೦೯
೨. ಶಾಸಕ-ನಿರ್ವಾಚನ ೧೧೪
೩. ಶಾಸಕರ ಯೋಗ್ಯತಾ ಕರ್ತವ್ಯ ನಿರೂಪಣ ೧೧೫
೪. ಹದಿನೆಂಟು ಕೆಟ್ಟ ಚಟಗಳ ವರ್ಣನೆ ೧೧೫
೫. ಸಭಾಸದ-ಮಂತ್ರಿಗಳ ಅರ್ಹತ್ವ ನಿರೂಪಣ ೧೧೭
೬. ದುರ್ಗನಿರ್ಮಾಣ-ಯುದ್ಧನೀತಿ ೧೧೮
೭. ಸಂಗ್ರಾಮದಲ್ಲಿ ಆವಧ್ಯರು-ಯುದ್ಧಕ್ರಮ ೧೨೦
೮. ರಾಜಕಾರ್ಯನಿರ್ವಹಣ ಕ್ರಮ ೧೨೧
೯. ರಾಜಾದಾಯ ವಿಧಾನ ೧೨೫
೧೦. ನ್ಯಾಯ ನಿರ್ಣಯ ವಿಧಾನ ೧೩೩
೧೧. ಸಾಕ್ಷಿಗಳ ಸ್ವರೂಪ ವರ್ಣನ ೧೩೫

೧೨. ವಿವಿಧ ದಂಡ ವಿಧಾನ ವರ್ಣನ ೧೩೯

೧೩. ವ್ಯಭಿಚಾರಕ್ಕೆ ಕಠೋರ ದಂಡ ೧೪೧

೧೪. ನೌಕಾ-ಕರ ವಿಧಾನ ೧೪೨

ಸಪ್ತಮ ಸಮುಲ್ಲಾಸ

೧. ಈಶ್ವರ ಸ್ವರೂಪ ವರ್ಣನ-ದೇವತಾಗಣನ ೧೪೪

೨. ಈಶ್ವರ ಸಿದ್ಧಿ-ಅನೇಕೇಶ್ವರವಾದ ನಿರಾಕರಣ ೧೪೬

೩. ಈಶ್ವರನ ಸರ್ವವ್ಯಾಪಕತ್ವ ನಿರೂಪಣ ೧೪೬

೪. ಸ್ತುತಿ ಪ್ರಾರ್ಥನೋಪಾಸನಾ ವಿಧಾನ ೧೪೮

೫. ಅವತಾರವಾದ ನಿರಾಕರಣ ೧೫೫

೬. ಜೀವಾತ್ಮನ ಸ್ವಾತಂತ್ರ್ಯ-ಪಾರತಂತ್ರ್ಯ ನಿರೂಪಣ ೧೫೭

೭. ಜೀವಾತ್ಮನ ಅನಾದಿತ್ವ ಮತ್ತು ಲಕ್ಷಣಗಳು ೧೫೭

೮. ಜೀವ-ಬ್ರಹ್ಮ ಭೇದ ಪ್ರತಿಪಾದನ ೧೫೭

೯. ಪ್ರಚಲಿತ ಚೇತನೈಕ್ಯವಾದ ನಿರಾಕರಣ ೧೫೯

೧೦. ಈಶ್ವರನ ಸಗುಣತ್ವ-ನಿರ್ಗುಣತ್ವ ಪ್ರತಿಪಾದನೆ ೧೬೪

೧೧. ವೇದ ಪ್ರಕಾಶನ ಕ್ರಮ ನಿರೂಪಣ ೧೬೬

೧೨. ವೇದಗಳ ಈಶ್ವರೀಯತ್ವ ಪ್ರತಿಷ್ಠಾಪನ ೧೬೬

೧೩. ವೇದ-ಸಂಹಿತಾ-ಪ್ರಾಮಾಣ್ಯಸ್ಥಾಪನ ೧೬೮

ಅಷ್ಟಮ ಸಮುಲ್ಲಾಸ

೧. ಸೃಷ್ಟ್ಯುತ್ಪತ್ತಿ ಪ್ರಕರಣ ೧೭೦

೨. ಪ್ರಕೃತಿಯ ಮತ್ತು ಜೀವರ ಅನಾದಿತ್ವಕಥನ ೧೭೧

೩. ಜಗತ್ಕಾರಣತ್ರಯ ನಿರೂಪಣ ೧೭೩

೪. ಅಭಿನ್ನನಿಮಿತ್ತೋಪಾದಾನಕಾರಣ ನಿರಾಕರಣ ೧೭೩

೫. ನಾಸ್ತಿಕವಾದದ ಪೂರ್ಣನಿರಾಕರಣ ೧೭೬

೬. ಸೃಷ್ಟಿ ವಿಷಯದಲ್ಲಿ ಭಿನ್ನ ಭಿನ್ನ ಶಾಸ್ತ್ರಗಳ ಸಮನ್ವಯ ೧೮೦

೭. ಸೃಷ್ಟಿರಚನಾ ಕೌಶಲ ಮತ್ತು ಸೃಜನವಿಧಾನ ೧೮೨

೮. ಅಮೈಥುನೀ ಸೃಷ್ಟಿ ಹಾಗೂ ಮಾನವರ ಆದ್ಯಜನ್ಮಸ್ಥಾನ ೧೮೩

೯. ಮಾನವ ಜಾತಿಯ ಏಕತ್ವ ಪ್ರತಿಪಾದನ ೧೮೩

೧೦. ಆರ್ಯ-ದಸ್ಯು ಭೇದದ ರಹಸ್ಯ ೧೮೪

೧೧. ಸ್ವರಾಜ್ಯದ ಶ್ರೇಷ್ಠತ್ವದ ವರ್ಣನೆ ೧೮೫

೧೨. ಸೃಷ್ಟಿಯಾದುದು ಯಾವಾಗ? ೧೮೬

೧೩. ಪರಮಾತ್ಮನ ಸರ್ವಾಧಾರತ್ವ ವರ್ಣನೆ ೧೮೬

೧೪. ಸೂರ್ಯನ ಆಕರ್ಷಣ ಶಕ್ತಿಯ ನಿರೂಪಣ ೧೮೭

ನವಮ ಸಮುಲ್ಲಾಸ

೧. ವಿದ್ಯೆಯ ಮತ್ತು ಅವಿದ್ಯೆಯ ಲಕ್ಷಣಗಳು ೧೯೧

೨. ಮುಕ್ತಿ ಸ್ವಾಭಾವಿಕವಲ್ಲ; ನೈಮಿತ್ತಿಕ ೧೯೧

೩. ನವೀನ ವೇದಾಂತಿಗಳ ಮುಕ್ತಿಯ ವಿವೇಚನೆ ೧೯೨

೪. ಪ್ರತಿಬಿಂಬವಾದದ ವಿಶ್ಲೇಷಣ ೧೯೨

೫. ಉಪಾಧಿಕಲ್ಪಿತ ಜೀವೇಶ್ವರವಾದದ ವರ್ಣನೆ ೧೯೩

೬. ಅಧ್ಯಾರೋಪವಾದ ನಿರಾಕಾರಣ ೧೯೩

೭. ಮುಕ್ತಿಸ್ವರೂಪ-ಪ್ರತಿಪಾದನ ; ಜೀವನ ೨೪ ಶಕ್ತಿಗಳು ೧೯೪

೮. ಮುಕ್ತಿಯಿಂದ ಪುನರಾವೃತ್ತಿ ಪ್ರತಿಪಾದನ ೧೯೭

೯. ಮುಕ್ತಿ-ಸಾಧನ-ನಿರೂಪಣ ೧೯೯

೧೦. ಪಂಚಕೋಶ ವಿವರಣ ೨೦೦

೧೧. ಜಾಗ್ರತ್ ಸ್ವಪ್ನ ಸುಷುಪ್ತಿ ವಿವರಣ ೨೦೦

೧೨. ತ್ರಿವಿಧಶರೀರ ವರ್ಣನ ೨೦೦

೧೩. ಜೀವಾತ್ಮನೇ ಭೋಕ್ತೃವಾಗಿದ್ದಾನೆ ೨೦೦

೧೪. ಈಶ್ವರೀಯ ಅಂತರ್ವಾಣಿ ೨೦೦

೧೫. ಮುಕ್ತಿ ಸಾಧನಗಳು ೨೦೧

೧೬. ಪಂಚಕ್ಲೇಶಗಳು ೨೦೨
೧೭. ಮುಕ್ತಿಯ ಸ್ವರೂಪ ೨೦೨
೧೮. ಪುನರ್ಜನ್ಮವಾದ ೨೦೩
೧೯. ಜೀವಮಾತ್ರರ ಸಮಾನಸ್ವರೂಪತ್ವ ೨೦೪
೨೦. ಮುಕ್ತಿಯಲ್ಲಿಯೂ ಜೀವನ ಅಸ್ತಿತ್ವ ೨೦೬
೨೧. ಪ್ರಾಕೃತಿಕ ಗುಣಗಳ ಸ್ಪಷ್ಟೀಕರಣ ೨೦೭
೨೨. ತ್ರಿವಿಧದುಃಖನಿವೃತ್ತಿ ೨೧೧

ದಶಮ ಸಮುಲ್ಲಾಸ

೧. ಧರ್ಮಸ್ವರೂಪ ಮತ್ತು ಪ್ರಮಾಣ ೨೧೩
೨. ಜಿತೇಂದ್ರಿಯತ್ವ-ಸದಾಚಾರ ೨೧೫
೩. ತಾಯಿ-ತಂದೆ, ಗುರು-ಹಿರಿಯರ ಸೇವೆ ೨೧೭
೪. ದೇಶ-ದೇಶಾಂತರ ಸಂಚಾರ ಧರ್ಮಾನುಕೂಲ ೨೧೭
೫. ಎಲ್ಲೆಡೆಯೂ ಆಹಾರ ಶುದ್ಧಿ-ಸದ್ಗುಣ ಗ್ರಹಿಕೆ ೨೧೯
೬. ಶೂದ್ರಾಶೂದ್ರವಿವಾದ ಪರಿಹಾರ ೨೧೯
೭. ವರ್ಣಭೇದ ಪರಿತ್ಯಾಗ-ಐಕಮತ್ಯ ಸಾಧನೆ ೨೨೦
೮. ಮದ್ಯಪಾನ-ಮಾಂಸಾಹಾರ ಪರಿತ್ಯಾಗ ೨೨೦
೯. ಎಂಜಲೂಟ ಸರ್ವಥಾ ತ್ಯಾಜ್ಯ ೨೨೨
೧೧. ಚತುರ್ವರ್ಣಗಳಲ್ಲಿ ಪರಸ್ಪರ ಪ್ರೀತಿಭಾವ ೨೨೪

ಏಕಾದಶ ಸಮುಲ್ಲಾಸ

೧. ಭಾರತದ ಗತವಿದ್ಯಾವೈಭವ ೨೨೬
೨. ವೈಜ್ಞಾನಿಕ ಅಸ್ತ್ರ-ಶಸ್ತ್ರಗಳ ಪರಿಜ್ಞಾನ ೨೨೭
೩. ಗೋಲ್ಡಸ್ಟಕರ್-ದಾರಾಶಿಕೋಹರ ಧರ್ಮಪ್ರೇಮ ೨೨೮
೪. ಆರ್ಯಾವರ್ತದ ವೈಜ್ಞಾನಿಕ ಪ್ರಗತಿ ೨೨೮
೫. ಸತ್ಯವಾದ ಬ್ರಾಹ್ಮಣ್ಯದ ವಿನಾಶವೇ ಸರ್ವನಾಶದ ಮೂಲ ೨೨೯
೬. ವಾಮಮಾರ್ಗದ ಪ್ರಸರಣ ೨೩೧
೭. ಅಶ್ವಮೇಧದ ಸತ್ಯಾರ್ಥ ನಿರೂಪಣ ೨೩೪
೮. ಪಶುಬಲಿಯುಕ್ತ ಯಜ್ಞ ನಿರಾಕರಣ ೨೩೫
೯. ಮೃತಕ ಶ್ರಾದ್ಧ ವಿಶ್ಲೇಷಣ ೨೩೫
೧೦. ಜೈನಮತೋತ್ಥಾನ-ಮೂರ್ತಿಪೂಜಾ ಪ್ರಾರಂಭ ೨೩೫
೧೧. ಶಂಕರಾಚಾರ್ಯರ ವೇದಮತೋದ್ಧಾರ ೨೩೬
೧೨. ಶೈವಮತ ಪ್ರಸಾರ ೨೩೭
೧೩. ವೈಷ್ಣವಮತ ಪ್ರಸಾರ ೨೪೯
೧೪. ಸತ್ಯವಾದ ತಪಸ್ಸಿನ ನಿರೂಪಣ ೨೫೧
೧೫. ನಿರಾಕಾರ ಭಗವದುಪಾಸನಾದೇಶ ೨೫೪
೧೬. ಮೂರ್ತಿಪೂಜಾ ದೋಷ ನಿರೂಪಣ ೨೫೮
೧೭. ಸತ್ಯ ಪಂಚಾಯತನ ಪೂಜಾ ನಿರೂಪಣ ೨೬೦
೧೮. ನಾನಾ ಕಲ್ಪಿತ ದೇವೀದೇವತಾ ಮೂರ್ತ್ಯರ್ಚನ ವಿವೇಚನ ೨೬೧
೧೯. ತೀರ್ಥ-ಕ್ಷೇತ್ರಗಳ ವಿಮರ್ಶೆ ೨೬೮
೨೦. ಸತ್ಯವಾದ ಗುರುಮಹಿಮಾ ವಿಶ್ಲೇಷಣ ೨೭೦
೨೧. ಪುರಾಣಗಳು ವ್ಯಾಸಕೃತವಲ್ಲ ೨೭೧
೨೨. ಬ್ರಾಹ್ಮಣ-ಪುರಾಣಾದಿಗಳ ಸತ್ಯಸ್ವರೂಪ ೨೭೧
೨೩. ಪುರಾಣಗಳ ಪರಸ್ಪರ ವಿರೋಧ ೨೭೨
೨೪. ಗೀತಗೋವಿಂದ-ಭಾಗವತಗಳ ಕರ್ತೃಗಳಾರು? ೨೭೭
೨೫. ಸ್ತ್ರೀ-ಶೂದ್ರಾದಿ ಸರ್ವರಿಗೂ ವೇದಾಧಿಕಾರ ೨೭೮
೨೬. ಗ್ರಹಗಳ ಪ್ರಭಾವದ ವಿಮರ್ಶನ ೨೭೮
೨೭. ಶ್ರಾದ್ಧ-ತರ್ಪಣ-ದಾನಾದಿ ವಿಶ್ಲೇಷಣ ೨೮೧
೨೮. ಮರಣಾನಂತರ ಜೀವಗತಿ ವ್ಯಾಖ್ಯಾನ ೨೮೪
೨೯. ಪಾತ್ರಾಪಾತ್ರ ವಿವೇಚನ ೨೮೫
೩೦. ಉಪವಾಸ ವ್ರತಾದಿಗಳಲ್ಲಿ ಆಂತರಿಕ ವಿರೋಧ ೨೮೬
೩೧. ವಾಮಪಂಥ-ಮಾರಣಮೋಹನಾದಿ ಸಮೀಕ್ಷಣ ೨೮೮
೩೨. ಶೈವ-ವೈಷ್ಣವ-ಪಂಥ ವಿಶ್ಲೇಷಣ ೨೯೧

೩೩. ಖಾಖೀ-ನಾಥ-ಸಂಪ್ರದಾಯ ವಿಮರ್ಶೆ ೨೯೨

೩೪. ಸಿಕ್ಖ್ ಸಂಪ್ರದಾಯ ಸಮೀಕ್ಷಾ ೨೯೬

೩೫. ದಾದೂ ಪಂಥ-ರಾಮಸ್ನೇಹೀ ಪಂಥ ೨೯೮

೩೬. ಗೋಕುಲೀಯ ಸಂಪ್ರದಾಯ ೩೦೧

೩೭. ಸ್ವಾಮೀ ನಾರಾಯಣಮತವಿಮರ್ಶನ ೩೦೭

೩೮. ಮತಮತಾಂತರಪರೀಕ್ಷಣಕ್ಕೊಂದು ದೃಷ್ಟಾಂತ ೩೦೮

೩೯. ಮಧ್ವಮತ ಪರ್ಯಾಲೋಚನ ೩೧೦

೪೦. ಲಿಂಗಾಯತ ಮತ ಪರೀಕ್ಷಣ ೩೧೧

೪೧. ಬ್ರಾಹ್ಮಸಮಾಜ-ಪ್ರಾರ್ಥನಾಸಮಾಜ ವಿಶ್ಲೇಷಣ೩೧೧

೪೨. ಮತಮತಾಂತರಗಳ ನಿಷ್ಪಕ್ಷ ಸಮೀಕ್ಷಣ ೩೧೬

೪೩. ಆರ್ಯರಾಜ ವಂಶಾವಳಿ ೩೨೫

**ದ್ವಾದಶ ಸಮುಲ್ಲಾಸ**

೧. ಅನುಭೂಮಿಕಾ ೩೩೧

೨. ನಾಸ್ತಿಕಮತ ವಿವೇಚನ ೩೩೨

೩. ಚಾರವಾಕಾದಿ ಮತಭೇದಗಳು ೩೩೪

೪. ಬೌದ್ಧ-ಸೌಗತಮತ ವಿವೇಚನೆ ೩೩೭

೫. ಜೀವ-ಪುದ್ಗಲಾದಿಗಳು ೩೪೩

೬. ಸಪ್ತಭಂಗೀ-ಸ್ಯಾದ್ವಾದ ೩೪೩

೭. ಜೈನ-ಬೌದ್ಧ ಮತೈಕ್ಯ ೩೪೫

೮. ಆಸ್ತಿಕ-ನಾಸ್ತಿಕ-ಸಂವಾದ ೩೪೭

೯. ಜಗದನಾದಿತ್ವ ವಿಮರ್ಶನ ೩೪೭

೧೦. ಜೈನರ ಪರಮತದ್ವೇಷ ೩೬೧

೧೧. ಜೈನರ ಮುಕ್ತಿವರ್ಣನ ೩೭೦

೧೨. ಜೈನ ಮತದ ಮತ್ತು ತೀರ್ಥಂಕರರ ವಿವೇಚನೆ ೩೭೨

**ತ್ರಯೋದಶ ಸಮುಲ್ಲಾಸ**

೧. ಅನುಭೂಮಿಕಾ ೩೮೪

೨. ತೌರೇತಿನ ವಿಶ್ಲೇಷಣ-ಸೃಷ್ಟಿವರ್ಣನ ೩೮೫

೩. ಸಾಕಾರನಾದ ಜೆಹೋವಾ ೩೯೦

೪. ನೂಹನ ನಾವೆ-ಜಲಪ್ಲಾವನ ೩೯೦

೫. ಯಾತ್ರಾಪುಸ್ತಕ ಸಮಾಲೋಚನ ೩೯೭

೬. ಜೀವಹಿಂಸಾಮಯ ಹೋಮ ವಿಧಿ ೪೦೦

೭. ಏಸುವಿನ ಜನನ-ಮಾನವ ವಿಮೋಚನ ೪೦೪

**ಚತುರ್ದಶ ಸಮುಲ್ಲಾಸ**

೧. ಅನುಭೂಮಿಕಾ ೪೨೫

೨. ಕುರಾನ್ ಕಥಿತ ಈಶ್ವರ ಸ್ವರೂಪ ೪೨೬

೩. ಕುರಾನ್ ವರ್ಣಿತವಾದ ಸ್ವರ್ಗದ ವರ್ಣನ ೪೨೮

೪. ಮೋಸೆಸ್-ಏಸುಗಳೂ ಪೈಗಂಬರರೇ ೪೩೧

೫. ಪವಿತ್ರ ರಮ್‌ಜಾನ್-ಮದನೋತ್ಸವ ೪೩೫

೬. ಕಾಫಿರರ ಹತ್ಯಾನುಮತಿ ೪೩೫

ಸ್ವಮಂತವ್ಯ-ಅಮಂತವ್ಯಪ್ರಕಾಶನ ೪೭೭

॥ ಓಂ ॥

ಸಚ್ಚಿದಾನಂದೇಶ್ವರಾಯ ನಮೋ ನಮಃ

# ಭೂಮಿಕಾ

(೧) ಯಾವ ಕಾಲದಲ್ಲಿ ನಾನು ಈ "ಸತ್ಯಾರ್ಥ ಪ್ರಕಾಶ" ಗ್ರಂಥವನ್ನು ರಚಿಸಿದ್ದೆನೋ, ಆ ಕಾಲದಲ್ಲಿ ಮತ್ತು ಅದಕ್ಕೆ ಮೊದಲು ನಾನು ಸಂಸ್ಕೃತದಲ್ಲಿ ಮಾತನಾಡುತ್ತಿದ್ದುದರಿಂದ, ಪಠನ-ಪಾಠನಗಳಲ್ಲಿಯೂ ಸಂಸ್ಕೃತವನ್ನೇ ಬಳಸುತ್ತಿದ್ದುದರಿಂದ ಮತ್ತು ಜನ್ಮಭೂಮಿಯ ಭಾಷೆ ಗುಜರಾತಿಯಾಗಿದ್ದುದರಿಂದ ನನಗೆ ಈ (ಹಿಂದೀ) ಭಾಷೆಯ ವಿಶೇಷ ಪರಿಜ್ಞಾನವಿರಲಿಲ್ಲ. ಈ ಕಾರಣದಿಂದ ಭಾಷೆಯು ಅಶುದ್ಧವಾಗಿಹೋಗಿದ್ದಿತು. ಈಗ ಭಾಷೆಯನ್ನು ಮಾತನಾಡುವ ಮತ್ತು ಬರೆಯುವ ಅಭ್ಯಾಸವಾಗಿದೆ. ಆದುದರಿಂದ ಈ ಗ್ರಂಥವನ್ನು ಭಾಷಾ ವ್ಯಾಕರಣಾನುಸಾರವಾಗಿ ಶುದ್ಧಗೊಳಿಸಿ, ಎರಡನೆಯ ಸಾರಿ ಮುದ್ರಣಮಾಡಿಸಿದ್ದೇನೆ. ಒಂದೊಂದೆಡೆ ಶಬ್ದ - ವಾಕ್ಯ - ರಚನೆಯಲ್ಲಿ ವ್ಯತ್ಯಾಸವುಂಟಾಗಿದೆ. ಹಾಗೆ ಮಾಡುವುದು ಉಚಿತವಾಗಿತ್ತು. ಏಕೆಂದರೆ, ಅದನ್ನು ವ್ಯತ್ಯಾಸಮಾಡದೆ, ಭಾಷಾ ಶೈಲಿಯು ಉತ್ತಮಗೊಳ್ಳುವುದು ಕಠಿನವಾಗಿದ್ದಿತು. ಆದರೆ, ಅರ್ಥದಲ್ಲಿ ವ್ಯತ್ಯಾಸ ಮಾಡಲ್ಪಟ್ಟಿಲ್ಲ. ಆದರೆ ವಿಶೇಷವೇನೋ ಬರೆಯಲ್ಪಟ್ಟಿದೆ. ಆಹುದು ; ಮೊದಲ ಮುದ್ರಣದಲ್ಲಿ ಅಲ್ಲಲ್ಲಿ ಯಾವ ದೋಷಗಳು ಉಂಟಾಗಿದ್ದವೋ, ಅವುಗಳನ್ನು ಹೊರತೆಗೆದು, ಸಂಶೋಧಿಸಿ, ಸರಿಸರಿಯಾಗಿ ಮಾಡಲಾಗಿದೆ.

(೨) ಈ ಗ್ರಂಥವು ಹದಿನಾಲ್ಕು ಸಮುಲ್ಲಾಸಗಳು, ಎಂದರೆ ಹದಿನಾಲ್ಕು ವಿಭಾಗಗಳಲ್ಲಿ ರಚಿಸಲ್ಪಟ್ಟಿದೆ. ಇದರಲ್ಲಿ ಹತ್ತು ಸಮುಲ್ಲಾಸಗಳು ಪೂರ್ವಾರ್ಧದಲ್ಲಿಯೂ ಮತ್ತು ನಾಲ್ಕು ಉತ್ತರಾರ್ಧದಲ್ಲಿಯೂ ರಚಿತವಾಗಿವೆ. ಆದರೆ, ಕೊನೆಯ ಸಮುಲ್ಲಾಸಗಳೂ ಮತ್ತು ಅನಂತರ ಸ್ವಸಿದ್ಧಾಂತಗಳೂ ಯಾವುದೋ ಕಾರಣದಿಂದ ಮುದ್ರಿಸಲು ಶಕ್ಯವಾಗಲಿಲ್ಲ. ಈಗ ಅವುಗಳನ್ನೂ ಕೂಡ ಮುದ್ರಣಮಾಡಿಸಿದ್ದೇನೆ.

೧. ಪ್ರಥಮ ಸಮುಲ್ಲಾಸದಲ್ಲಿ ಈಶ್ವರನ ಓಂಕಾರವೇ ಮೊದಲಾದ ಹೆಸರುಗಳು ವ್ಯಾಖ್ಯಾನ.

೨. ದ್ವಿತೀಯ ಸಮುಲ್ಲಾಸದಲ್ಲಿ ಸಂತತಿಯ ಶಿಕ್ಷಣ.

೩. ತೃತೀಯ ಸಮುಲ್ಲಾಸದಲ್ಲಿ ಬ್ರಹ್ಮಚರ್ಯ, ಪಠನ-ಪಾಠನ-ವ್ಯವಸ್ಥೆ, ಸತ್ಯಾಸತ್ಯ ಗ್ರಂಥಗಳ ಹೆಸರುಗಳ ಮತ್ತು ಓದುವ- ಓದಿಸುವ ಕ್ರಮ.

೪. ಚತುರ್ಥ ಸಮುಲ್ಲಾಸದಲ್ಲಿ ವಿವಾಹ ಮತ್ತು ಗೃಹಾಶ್ರಮದ ವ್ಯವಹಾರ.

೫. ಪಂಚಮ ಸಮುಲ್ಲಾಸದಲ್ಲಿ ವಾನಪ್ರಸ್ಥ ಮತ್ತು ಸಂನ್ಯಾಸಾಶ್ರಮದ ವಿಧಿ.

೬. ಷಷ್ಠ ಸಮುಲ್ಲಾಸದಲ್ಲಿ ರಾಜಧರ್ಮ.

೭. ಸಪ್ತಮ ಸಮುಲ್ಲಾಸದಲ್ಲಿ ವೇದೇಶ್ವರ ವಿಷಯ.

೮. ಅಷ್ಟಮ ಸಮುಲ್ಲಾಸದಲ್ಲಿ ಜಗತ್ತಿನ ಉತ್ಪತ್ತಿ, ಸ್ಥಿತಿ ಮತ್ತು ಪ್ರಳಯ.

೯. ನವಮ ಸಮುಲ್ಲಾಸದಲ್ಲಿ ವಿದ್ಯೆ, ಅವಿದ್ಯೆ, ಬಂಧ ಮತ್ತು ಮೋಕ್ಷದ ವ್ಯಾಖ್ಯಾನ.

೧೦. ದಶಮ ಸಮುಲ್ಲಾಸದಲ್ಲಿ ಆಚಾರ-ಅನಾಚಾರ ಭಕ್ಷ್ಯಾಭಕ್ಷ್ಯಗಳ ವಿಷಯ.

೧೧. ಏಕಾದಶ ಸಮುಲ್ಲಾಸದಲ್ಲಿ ಆರ್ಯಾವರ್ತೀಯ ಮತಮತಾಂತರಗಳ ಖಂಡನ- ಮಂಡನ ವಿಷಯ.

೧೨. ದ್ವಾದಶ ಸಮುಲ್ಲಾಸದಲ್ಲಿ ಚಾರ್ವಾಕ, ಬೌದ್ಧ ಮತ್ತು ಜೈನ ಮತಗಳ ವಿಷಯ.

೧೩. ತ್ರಯೋದಶ ಸಮುಲ್ಲಾಸದಲ್ಲಿ ಕ್ರೈಸ್ತ ಮತದ ವಿಷಯ.

೧೪. ಚತುರ್ದಶ ಸಮುಲ್ಲಾಸದಲ್ಲಿ ಮುಸಲ್ಮಾನರ ಮತದ ವಿಷಯ.

(೩) ಮತ್ತು ಹದಿನಾಲ್ಕು ಸಮುಲ್ಲಾಸಗಳ ಕೊನೆಯಲ್ಲಿ ಆರ್ಯರ ಸನಾತನ ವೇದ ವಿಹಿತ ಮತದ ವ್ಯಾಖ್ಯಾನವನ್ನು ವಿಶೇಷವಾದ ರೀತಿಯಲ್ಲಿ ಬರೆದಿದ್ದೇನೆ. ಅದನ್ನು ನಾನೂ ಕೂಡ ಯಥಾವತ್ತಾಗಿ ಅಂಗೀಕರಿಸುತ್ತೇನೆ.

(೪) ನನ್ನ ಈ ಗ್ರಂಥದ ರಚನೆಯ ಮುಖ್ಯವಾದ ಉದ್ದೇಶ್ಯ ಸತ್ಯ-ಸತ್ಯವಾದ ತತ್ವದ ಪ್ರಕಾಶನವನ್ನು ಮಾಡುವುದೇ ಆಗಿದೆ. ಎಂದರೆ, ಯಾವುದು ಸತ್ಯವಾಗಿದೆಯೋ, ಅದನ್ನು ಸತ್ಯವೆಂದೂ, ಮತ್ತು ಮಿಥ್ಯೆಯಾಗಿದೆಯೋ, ಅದನ್ನು ಮಿಥ್ಯೆ- ಎಂದೂ ಪ್ರತಿಪಾದಿಸುವುದನ್ನು ಸತ್ಯವಾದ ಅರ್ಥದ ಪ್ರಕಾಶನವೆಂದು ತಿಳಿದಿದ್ದೇನೆ. ಸತ್ಯದ ಸ್ಥಾನದಲ್ಲಿ ಅಸತ್ಯವನ್ನೂ, ಅಸತ್ಯದ ಸ್ಥಾನದಲ್ಲಿ ಸತ್ಯವನ್ನೂ ಪ್ರಕಾಶಿಸುವುದು ಸತ್ಯವೆನಿಸುವುದಿಲ್ಲ. ಆದರೆ ಯಾವ ಪದಾರ್ಥ ಹೇಗೆ ಇದೆಯೋ, ಅದನ್ನು ಹಾಗೆಯೇ ಹೇಳುವುದು, ಬರೆಯುವುದು ಮತ್ತು ಅಂಗೀಕರಿಸುವುದು ಸತ್ಯವೆನಿಸುತ್ತದೆ . ಯಾವ ಮನುಷ್ಯನು ಪಕ್ಷಪಾತಿಯಾಗಿರುತ್ತಾನೋ, ಅವನು ತನ್ನ ಅಸತ್ಯವನ್ನೂ ಕೂಡ ಸತ್ಯವೆಂದೂ, ಮತ್ತು ಇನ್ನೊಬ್ಬ ತನ್ನ ಎದುರಾಳಿಯಾದ ಮತದವನ ಸತ್ಯವನ್ನೂ ಕೂಡ ಅಸತ್ಯವೆಂದೂ ಸಿದ್ಧಪಡಿಸುವುದರಲ್ಲಿ ಪ್ರವೃತ್ತನಾಗುತ್ತಾನೆ. ಆದುದರಿಂದ ಅವನು ಸತ್ಯಮತವನ್ನು ಕಂಡುಕೊಳ್ಳಲಾರನು. ಆದುದರಿಂದಲೇ, ಉಪದೇಶಗಳ ಮತ್ತು ಲೇಖನಗಳ ಮೂಲಕ, ಸಮಸ್ತ ಮಾನವರ ಸಮ್ಮುಖದಲ್ಲಿ ಸತ್ಯಾಸತ್ಯಗಳ ಸ್ವರೂಪಗಳನ್ನು ಸಮರ್ಪಿತವಾಗಿ ಮಾಡುವುದು ವಿದ್ವಾಂಸರಾದ ಆಪ್ತರ ಮುಖ್ಯ ಕರ್ಮವಾಗಿರುತ್ತದೆ. ಆಮೇಲೆ ಅವರು ಸ್ವತಃ ತಮ್ಮ ಹಿತಾಹಿತಗಳನ್ನರಿತು ಸತ್ಯಾರ್ಥ ಸ್ವೀಕಾರವನ್ನೂ ಮತ್ತು ಮಿಥ್ಯಾರ್ಥದ ಪರಿತ್ಯಾಗವನ್ನೂ ಮಾಡಿ ಸದಾ ಆನಂದದಲ್ಲಿರಲಿ. ಮಾನವನ ಆತ್ಮ ಸತ್ಯಾಸತ್ಯಗಳನ್ನು ತಿಳಿದುಕೊಳ್ಳುವವನಾಗಿದ್ದಾನೆ. ಹಾಗಿದ್ದರೂ ಕೂಡ, ತನ್ನ ಸ್ವಾರ್ಥದ ಸಿದ್ಧಿ , ಹಠ, ದುರಾಗ್ರಹ ಮತ್ತು ಅವಿದ್ಯೆ ಮೊದಲಾದ ದೋಷಗಳಿಂದ, ಸತ್ಯವನ್ನು ಬಿಟ್ಟು ಅಸತ್ಯದ ಕಡೆಗೆ ಓಲುತ್ತಾನೆ. ಆದರೆ, ಈ ಗ್ರಂಥದಲ್ಲಿ ಅಂತಹ ವಿಷಯವೇನನ್ನೂ ಪ್ರಸ್ತುತಪಡಿಸಿಲ್ಲ ಮತ್ತು ಯಾವನದೇ ಮನಸ್ಸನ್ನು ನೋಯಿಸುವುದು ಅಥವಾ ಯಾವನಿಗಾದರೂ ಹಾನಿಯನ್ನುಂಟುಮಾಡುವುದು (ನನ್ನ) ಗುರಿಯಲ್ಲ. ಆದರೆ, ಮಾನವ ಜಾತಿಯ ಉನ್ನತಿ ಮತ್ತು ಉಪಕಾರವಾಗುವಂತೆ, ಸತ್ಯಾ-ಸತ್ಯಗಳನ್ನು ಮಾನವ ಮಾತ್ರರು ತಿಳಿದು, ಸತ್ಯದ ಸ್ವೀಕಾರವನ್ನೂ ಮತ್ತು ಅಸತ್ಯದ ಪರಿತ್ಯಾಗವನ್ನೂ ಮಾಡಲಿ. ಏಕೆಂದರೆ, ಸತ್ಯೋಪದೇಶದ ಹೊರತು ಬೇರೆ ಯಾವುದೂ ಕೂಡ ಮಾನವ ಜಾತಿಯ ಉನ್ನತಿಗೆ ಕಾರಣವಾಗಿರುವುದಿಲ್ಲ.

(೫) ಈ ಗ್ರಂಥದಲ್ಲಿ ಎಲ್ಲಿ- ಎಲ್ಲಿಯಾದರೂ ವಿಸ್ಮರಣ - ಅನೌಚಿತ್ಯದಿಂದ ಅಥವಾ ಸಂಶೋಧದಲ್ಲಿ ಮತ್ತು ಮುದ್ರಣದಲ್ಲಿ ಲೋಪ - ದೋಷಗಳು ಉಳಿದುಹೋಗಿದ್ದರೆ, ಅದನ್ನು ತಿಳಿಯುವುದರಿಂದ - ತಿಳಿಸುವುದರಿಂದ, ಸತ್ಯ ಹೇಗಿರುವುದೋ ಹಾಗೆಯೇ ಸರಿಪಡಿಸಲ್ಪಡುವುದು . ಮತ್ತು ಯಾವನಾದರೂ ಪಕ್ಷಪಾತದಿಂದ ಅನ್ಯಥಾ ಸಂದೇಹವನ್ನು ಅಥವಾ ಖಂಡನ-ಮಂಡನವನ್ನು ಮಾಡುವನಾದರೆ, ಅದರ ಮೇಲೆ ಗಮನ ಕೊಡಲ್ಪಡುವುದಿಲ್ಲ. ಅಹುದು: ಅವನು ಮಾನವಮಾತ್ರರ ಹಿತೈಷಿಯಾಗಿ ಏನನ್ನಾದರೂ ತಿಳಿಸುವನಾದರೆ, ಅದನ್ನು ಸತ್ಯವಾಗಿಯೂ ಸತ್ಯವೆಂದು ತಿಳಿದ ಮೇಲೆ, ಅವನ ಅಭಿಪ್ರಾಯ ಸಂಗ್ರಹಿಸಲ್ಪಡುವುದು.

(೬) ಈ ದಿನಗಳಲ್ಲಿ ಬಹಳ ಮಂದಿ ವಿದ್ವಾಂಸರು ಪ್ರತಿಯೊಂದು ಮತದಲ್ಲಿಯೂ ಇದ್ದಾರೆ. ಅವರು ಪಕ್ಷಪಾತವನ್ನು ಬಿಟ್ಟು, ಸರ್ವತಂತ್ರ ಸಿದ್ಧಾಂತಗಳನ್ನು, ಎಂದರೆ, ಯಾವ ಯಾವ ಮಾತುಗಳು ಎಲ್ಲರಿಗೂ ಅನುಕೂಲವಾಗಿ ಎಲ್ಲವುಗಳಲ್ಲಿಯೂ ಸತ್ಯವಾಗಿವೆಯೋ, ಅವುಗಳ ಸ್ವೀಕಾರವನ್ನೂ ಮತ್ತು ಒಬ್ಬರದು ಇನ್ನೊಬ್ಬರಿಗೆ ವಿರುದ್ಧವಾದ ಯಾವ ಮಾತುಗಳಿವೆಯೋ, ಅವುಗಳ ತ್ಯಾಗವನ್ನೂ ಮಾಡಿ, ಪರಸ್ಪರ ಪ್ರೀತಿಯಿಂದ ವರ್ತಿಸುವರಾದರೆ- ಪ್ರವರ್ತನೆಮಾಡಿಸುವರಾದರೆ, ಜಗತ್ತಿಗೆ ಪೂರ್ಣಹಿತವಾದೀತು . ಏಕೆಂದರೆ, ವಿದ್ವಾಂಸರುಗಳ ವಿರೋಧದಿಂದ ಅವಿದ್ವಾಂಸರಲ್ಲಿ ವಿರೋಧ ಹೆಚ್ಚಿ , ಅನೇಕ ವಿಧದ ದುಃಖಗಳ ವೃದ್ಧಿಯೂ ಮತ್ತು ಸುಖದ ಹಾನಿಯೂ ಆಗುತ್ತದೆ. ಯಾವುದು ಸ್ವಾರ್ಥೀ ಜನರಿಗೆ ಪ್ರಿಯವೋ, ಅಂತಹ ಈ ಹಾನಿಯು ಮಾನವರೆಲ್ಲರನ್ನೂ ದುಃಖಸಾಗರದಲ್ಲಿ ಮುಳುಗಿಸಿ ಬಿಟ್ಟದೆ. ಇವರುಗಳಲ್ಲಿ ಯಾವನು

ಸಾರ್ವಜನಿಕ ಹಿತವನ್ನು ಲಕ್ಷ್ಯದಲ್ಲಿಟ್ಟು , ಪ್ರವೃತ್ತ ನಾಗುತ್ತಾನೋ, ಅವನೊಂದಿಗೆ ಸ್ವಾರ್ಥೀಜನರು ವಿರೋಧವನ್ನು ಮಾಡುವುದರಲ್ಲಿ ತತ್ಪರರಾಗಿ, ಅನೇಕ ಪ್ರಕಾರದಿಂದ ವಿಘ್ನವನ್ನುಂಟುಮಾಡುತ್ತಾರೆ. ಆದರೆ,"**ಸತ್ಯಮೇವ ಜಯತೇ ನಾನೃತಂ, ಸತ್ಯೇನ ಪಂಥಾ ವಿತತೋ ದೇವಯಾನಃ।**" ಎಂದರೆ,"ಸರ್ವದಾ ಸತ್ಯಕ್ಕೆಯೇ ವಿಜಯವೂ ಮತ್ತು ಅಸತ್ಯದ ಪರಾಜಯವೂ ಆಗುತ್ತದೆ. ಸತ್ಯದಿಂದಲೇ ಸತ್ಯದ ಮಾರ್ಗ ವಿಸ್ತೃತವಾಗುತ್ತದೆ"- ಎಂಬ ದೃಢ ನಿಶ್ಚಯದ ಅಲಂಬನದಿಂದ, ಆಪ್ತ ಜನರು ಪರೋಪಕಾರ ಮಾಡುವುದರ ಕಡೆಯಿಂದ ಉದಾಸೀನರಾಗಿ, ಎಂದಿಗೂ ಸತ್ಯಾರ್ಥದ ಪ್ರಕಾಶವನ್ನು ಮಾಡುವುದರಿಂದ ದೂರಸರಿಯುವುದಿಲ್ಲ. "**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್**" - ಇದು ಗೀತಾವಚನವಾಗಿದೆ. ಇದು ಮಹಾದೃಢವಾದ ನಿಶ್ಚಯವಾಗಿದೆ. "ವಿದ್ಯೆಯ ಮತ್ತು ಧರ್ಮಪ್ರಾಪ್ತಿಯ ಯಾವ ಯಾವ ಕರ್ಮಗಳಿವೆಯೋ, ಅವು ಮಾಡುವ ಮೊದಲಿನಲ್ಲಿ ವಿಷಕ್ಕೆ ಸಮನಾಗಿಯೂ ಮತ್ತು ಆಮೇಲೆ ಅಮೃತಕ್ಕೆ ಸದೃಶವಾಗಿಯೂ ಇರುತ್ತವೆ". - ಎನ್ನುವುದು ಇದರ ಅಭಿಪ್ರಾಯವಾಗಿದೆ. ಇಂತಹ ಮಾತುಗಳನ್ನು ಚಿತ್ತದಲ್ಲಿಟ್ಟುಕೊಂಡು, ನಾನು ಈ ಗ್ರಂಥವನ್ನು ರಚಿಸಿದ್ದೇನೆ. ಶ್ರೋತೃಗಳೂ ಮತ್ತು ಪಾಠಕರುಗಳೂ ಕೂಡ ಮೊದಲು ಪ್ರೇಮದಿಂದ ನೋಡಿ, ಈ ಗ್ರಂಥದ ಸತ್ಯ ಸತ್ಯವಾದ ತಾತ್ಪರ್ಯವನ್ನರಿತು, ಹೇಗೆ ಇಷ್ಟವಾಗುವುದೋ, ಹಾಗೆ ಮಾಡಲಿ.

(೭) ಇದರಲ್ಲಿ ಈ ಅಭಿಪ್ರಾಯ ಪ್ರಸ್ತುತಗೊಳಿಸಲ್ಪಟ್ಟಿದೆ : ಎಲ್ಲ ಮತಗಳಲ್ಲಿಯೂ ಯಾವ ಯಾವ ಸತ್ಯ-ಸತ್ಯವಾದ ತತ್ತ್ವಗಳಿವೆಯೋ, ಅವು ಎಲ್ಲದರಲ್ಲಿಯೂ ಅವಿರುದ್ಧವಾಗಿರುವುದರಿಂದ ಅವುಗಳನ್ನು ಸ್ವೀಕರಿಸಿ, ಮತ-ಮತಾಂತರಗಳಲ್ಲಿ ಯಾವ ಯಾವ ಮಿಥ್ಯಾ ತತ್ತ್ವಗಳಿವೆಯೋ ಅವುಗಳ ಖಂಡನವನ್ನು ಮಾಡಿದ್ದೇನೆ. ಇದರಲ್ಲಿ , ಸಮಸ್ತ ಮತ ಮತಾಂತರಗಳ ಗುಪ್ತವಾದ ಅಥವಾ ಪ್ರಕಟವಾದ ಕೆಟ್ಟ ವಿಷಯಗಳನ್ನು ಪ್ರಕಾಶಪಡಿಸಿ, ಎಲ್ಲರೊಂದಿಗೂ ಎಲ್ಲರ ಸಮಾಲೋಚನೆಯು ನಡೆದು, ಪರಸ್ಪರ ಪ್ರೇಮಯುಕ್ತರಾಗಿ, ಒಂದು ಸತ್ಯಮತದಲ್ಲಿ ನಿರತರಾಗುವಂತೆ, ವಿದ್ವಾಂಸರ - ಅವಿದ್ವಾಂಸರ ಸರ್ವಸಾಧಾರಣ ಮಾನವರ ಸಮ್ಮುಖದಲ್ಲಿ ಮಂಡಿಸಬೇಕೆಂಬ ಅಭಿಪ್ರಾಯವನ್ನೂ ಕೂಡ ಇಟ್ಟುಕೊಂಡಿದ್ದೇನೆ.

(೮) ನಾನು ಆರ್ಯಾವರ್ತ ದೇಶದಲ್ಲಿ ಹುಟ್ಟಿದವನಾದರೂ ಮತ್ತು ವಾಸಿಸುತ್ತಾ ಇದ್ದರೂ ಕೂಡ, ಹೇಗೆ ಈ ದೇಶದ ಮತಮತಾಂತರಗಳ ಮಿಥ್ಯಾವಿಷಯಗಳ ಬಗೆಗೆ ಪಕ್ಷಪಾತಮಾಡದೆ, ಇರುವುದನ್ನು ಇರುವಂತೆಯೇ ಪ್ರಕಟಪಡಿಸುತ್ತೇನೋ ಹಾಗೆಯೇ ಅನ್ಯದೇಶಿಯರೊಂದಿಗೂ ಅಥವಾ ಸಂಪ್ರದಾಯೋನ್ನತಿಯನ್ನು ಇಚ್ಛಿಸುವವರೊಂದಿಗೂ ವರ್ತಿಸುತ್ತೇನೆ. ಹೇಗೆ ಸ್ವದೇಶೀಯರೊಂದಿಗೆ ಮಾನವೋನ್ನತಿಯ ವಿಷಯದಲ್ಲಿ ವರ್ತಿಸುತ್ತೇನೋ, ಹಾಗೆ ವಿದೇಶೀಯರೊಂದಿಗೂ ಕೂಡ; ಅದೇ ರೀತಿ ಸಮಸ್ತ ಸಜ್ಜನರೂ ವರ್ತಿಸುವುದು ಯೋಗ್ಯವಾಗಿರುತ್ತದೆ. ಏಕೆಂದರೆ, ನಾನೂ ಕೂಡ ಯಾವುದಾದರೂ ಒಂದು ಮತದ ಪಕ್ಷಪಾತಿಯಾಗಿದ್ದರೆ, ಹೇಗೆ ಆಧುನಿಕರು ಸ್ವಮತದ ಸ್ತುತಿಯನ್ನೂ, ಮಂಡನವನ್ನೂ ಮತ್ತು ಪ್ರಚಾರವನ್ನೂ ಮಾಡುತ್ತಾರೋ ಮತ್ತು ಅನ್ಯಮತದ ನಿಂದೆಯನ್ನೂ, ಹಾನಿಯನ್ನೂ ಮತ್ತು ನಿರೋಧವನ್ನೂ ಮಾಡುವುದರಲ್ಲಿ ತತ್ಪರರಾಗಿರುತ್ತಾರೋ, ಹಾಗೆಯೇ ನಾನೂ ಮಾಡುತ್ತಿದ್ದೆನು. ಆದರೆ, ಇಂತಹ ಮಾತುಗಳು ಮಾನವತ್ವದಿಂದ ಹೊರಗಿನವಾಗಿವೆ. ಏಕೆಂದರೆ, ಪಶುವು ಬಲಶಾಲಿಯಾಗಿ ನಿರ್ಬಲ ಜೀವರಿಗೆ ದುಃಖವನ್ನುಂಟುಮಾಡುವಂತೆ, ಮತ್ತು ಸಾಯಿಸಿಯೂ ಬಿಡುವಂತೆ ಮನುಷ್ಯ ಶರೀರವನ್ನು ಹೊಂದಿಯೂ ಅಂತಹ ಕರ್ಮವನ್ನೇ ಮಾಡುತ್ತಾರಾದರೆ, ಅವರು ಮನುಷ್ಯ ಸ್ವಭಾವಯುಕ್ತರಲ್ಲ; ಆದರೆ, ಪಶುಗಳಂತೆ ಇದ್ದಾರೆ. ಮತ್ತು ಯಾವನು ಬಲಶಾಲಿಯಾಗಿ, ನಿರ್ಬಲರ ರಕ್ಷಣೆಯನ್ನು ಮಾಡುತ್ತಾನೋ, ಅವನೇ ಮಾನವನೆನಿಸುತ್ತಾನೆ. ಮತ್ತು ಯಾವನು ಸ್ವಾರ್ಥಕ್ಕೆ ವಶನಾಗಿ ಪರಹಾನಿಮಾತ್ರವನ್ನು ಮಾಡುತ್ತಾನೋ, ಅವನು ಪಶುಗಳಿಗೂ ಹಿರಿಯ ಅಣ್ಣನೆಂದೇ ತಿಳಿಯಿರಿ.

(೯) ಈಗ ಆರ್ಯಾವರ್ತೀಯರ ವಿಷಯದಲ್ಲಿ ವಿಶೇಷವಾಗಿ ಹನ್ನೊಂದನೆಯ ಸಮ್ಮುಲ್ಲಾಸದವರೆಗೆ ಬರೆದಿದ್ದೇನೆ. ಈ ಸಮುಲ್ಲಾಸಗಳಲ್ಲಿ ಯಾವ ಸತ್ಯಮತವನ್ನು ಪ್ರಕಾಶಪಡಿಸಿದ್ದೇನೋ, ಅದು ವೇದೋಕ್ತವಾಗಿರುವುದರಿಂದ ನನಗೆ ಸರ್ವಥಾ ಮಾನನೀಯವಾಗಿದೆ. ಮತ್ತು ಯಾವ ನವೀನವಾದ ಪುರಾಣಗಳು, ತಂತ್ರಗಳು - ಮೊದಲಾದ ಗ್ರಂಥಗಳಲ್ಲಿ ಉಕ್ತವಾದ ಮಾತುಗಳ ಖಂಡನವನ್ನು ಮಾಡಿದ್ದೇನೊ, ಅವು ತ್ಯಾಜ್ಯವಾಗಿವೆ.

(೧೦) ಹನ್ನೆರಡನೆಯ ಸಮುಲ್ಲಾಸದಲ್ಲಿ ಯಾವುದನ್ನು ತೋರಿಸಿದ್ದೇನೋ, ಆ ಚಾರ್ವಾಕ ಮತವು ಈ ಕಾಲದಲ್ಲಿ ಕ್ಷೀಣವಾಗಿ ಅಸ್ತವಾದಂತೆ

ಇದ್ದರೂ ಕೂಡ, ಈ ಚಾರ್ವಾಕ ಮತವು ಅನೀಶ್ವರವಾದ ಮೊದಲಾದುವುಗಳಲ್ಲಿ ಬೌದ್ಧ-ಜೈನ-ಮತಗಳೊಂದಿಗೆ ಬಹಳ ಸಂಬಂಧವನ್ನು ಹೊಂದಿದೆ . ಈ ಚಾರ್ವಾಕನು ಎಲ್ಲರಿಗಿಂತ ದೊಡ್ಡ ನಾಸ್ತಿಕನಾಗಿದ್ದಾನೆ. ಅವನ ಉದ್ಯಮವನ್ನು ತಡೆಯುವುದು ಅವಶ್ಯವಾಗಿದೆ. ಏಕೆಂದರೆ, ಮಿಥ್ಯಾ ವಿಷಯವನ್ನು ತಡೆಯದಿದ್ದರೆ, ಜಗತ್ತಿನಲ್ಲಿ ಬಹಳ ಅನರ್ಥಗಳು ಪ್ರವೃತ್ತವಾಗಿ ಹೋಗುವುವು. ಚಾರ್ವಾಕನ ಯಾವ ಮತವಿದೆಯೋ, ಅದು ಮತ್ತು ಬೌದ್ಧರ ಹಾಗೂ ಜೈನರ ಯಾವ ಮತಗಳಿವೆಯೋ ಅವೂ ಕೂಡ ೧೨ ನೆಯ ಸಮುಲ್ಲಾಸದಲ್ಲಿ ಸಂಕ್ಷೇಪವಾಗಿ ಬರೆಯಲ್ಪಟ್ಟಿವೆ. ಮತ್ತು ಬೌದ್ಧರ ಹಾಗೂ ಜೈನರ ಮತಗಳಿಗೂ, ಚಾರ್ವಾಕ ಮತದೊಂದಿಗೆ ಹೊಂದಿಕೆಯಿದೆ . ಮತ್ತು ಅಲ್ಪ-ಸ್ವಲ್ಪ ವಿರೋಧವೂ ಇದೆ. ಮತ್ತು ಜೈನನೂ ಕೂಡ ಬಹಳ ಅಂಶಗಳಲ್ಲಿ ಚಾರ್ವಾಕರ ಹಾಗೂ ಬೌದ್ಧರ ಸಂಗಡ ಸಾದೃಶ್ಯವನ್ನು ಹೊಂದಿದ್ದಾನೆ ಮತ್ತು ಸ್ವಲ್ಪ ವಿಷಯಗಳಲ್ಲಿ ಭೇದವೂ ಇದೆ. ಆದುದರಿಂದ ಜೈನರದು ಬೇರೆಯ ಶಾಖೆಯೆಂದು ಎಣಿಸಲ್ಪಡುತ್ತದೆ. ಈ ಭೇದವನ್ನು ೧೨ನೆಯ ಸಮುಲ್ಲಾಸದಲ್ಲಿ ಬರೆದಿದ್ದೇನೆ. ಅಲ್ಲಿಯೇ ಯಥಾಯೋಗ್ಯವಾಗಿ ತಿಳಿದುಕೊಳ್ಳುವುದು. ಇದರ ಭೇದ ಯಾವುದು - ಯಾವುದಿದೆಯೋ ಅದನ್ನೆಲ್ಲಾ ೧೨ನೆಯ ಸಮುಲ್ಲಾಸದಲ್ಲಿ ತೋರಿಸಿದ್ದೇನೆ. ಬೌದ್ಧರ ಮತ್ತು ಜೈನರ ಮತದ ವಿಷಯವನ್ನೂ ಕೂಡ ಬರೆದಿದ್ದೇನೆ.

(೧೧) ಇವುಗಳಲ್ಲಿ ಬೌದ್ಧರ ದೀಪವಂಶ ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ (ಮತ್ತು) ಸರ್ವದರ್ಶನ ಸಂಗ್ರಹದಲ್ಲಿ ಬೌದ್ಧಮತ ಸಂಗ್ರಹವಾಗಿ ತೋರಿಸಲ್ಪಟ್ಟಿದೆ. ಅದರಿಂದ ತೆಗೆದು ಇಲ್ಲಿ ಬರೆದಿದ್ದೇನೆ. ಮತ್ತು ಈ ಕೆಳಗೆ ಬರೆಯಲ್ಪಟ್ಟಿರುವವು ಜೈನರ ಸಿದ್ಧಾಂತಗಳ ಪುಸ್ತಕಗಳಾಗಿವೆ. ಅವುಗಳಲ್ಲಿ:-

**ನಾಲ್ಕು ಮೂಲಸೂತ್ರಗಳು** :- ಎಂದರೆ- ೧. ಆವಶ್ಯಕ ಸೂತ್ರಗಳು. ೨. ವಿಶೇಷ ಆವಶ್ಯಕ ಸೂತ್ರಗಳು. ೩. ದಶವೈಕಾಲಿಕ ಸೂತ್ರಗಳು. ೪. ಪಾಕ್ಷಿಕ ಸೂತ್ರಗಳು.

**ಹನ್ನೊಂದು ಅಂಗಗಳು:-** ೧. ಆಚಾರಾಂಗ ಸೂತ್ರಗಳು. ೨. ಸುಗಡಾಂಗ ಸೂತ್ರಗಳು. ೩. ಥಾಣಾಂಗ ಸೂತ್ರಗಳು. ೪. ಸಮವಾಯಾಂಗ ಸೂತ್ರಗಳು, ೫. ಭಗವತೀ ಸೂತ್ರಗಳು. ೬. ಜ್ಞಾತಾಧರ್ಮಕಥಾ ಸೂತ್ರಗಳು ೭. ಉಪಾಸಕದಶಾ ಸೂತ್ರಗಳು. ೮. ಅಂತಗಡದಶಾ ಸೂತ್ರಗಳು, ೯. ಅನುತ್ತರೋವವಾಯೀ ಸೂತ್ರಗಳು. ೧೦. ತ್ರಿಪಾಕ ಸೂತ್ರಗಳು, ೧೧. ಪ್ರಶ್ನವ್ಯಾಕರಣ ಸೂತ್ರಗಳು

**ಹನ್ನೆರಡು ಉಪಾಂಗಗಳು** :- ೧. ಉಪವಾಈ ಸೂತ್ರಗಳು, ೨. ರಾಯಪಸೇಣೀ ಸೂತ್ರಗಳು. ೩. ಜೀವಾಭಿಗಮ ಸೂತ್ರಗಳು, ೪. ಪನ್ನವಣಾ ಸೂತ್ರಗಳು, ೫. ಜಂಬುದ್ವೀಪಪನ್ನತೀ ಸೂತ್ರಗಳು, ೬. ಚಂದಪನ್ನತೀ ಸೂತ್ರಗಳು. ೭. ಸೂರಪನ್ನತೀ ಸೂತ್ರಗಳು, ೮. ನಿರಿಯಾವಲೀ ಸೂತ್ರಗಳು. ೯. ಕಪ್ಪಿಯಾ ಸೂತ್ರಗಳು. ೧೦. ಕಪವಡೀಸಿಯಾ ಸೂತ್ರಗಳು. ೧೧. ಪೂಪ್ಪಿಯ ಸೂತ್ರಗಳು ಮತ್ತು ೧೨. ಪುಷ್ಪಚೂಲಿಯಾ ಸೂತ್ರಗಳು

**ಐದು ಕಲ್ಪ ಸೂತ್ರಗಳು:-** ೧. ಉತ್ತರಾಧ್ಯಯನ ಸೂತ್ರಗಳು. ೨. ನಿಶೀಥ ಸೂತ್ರಗಳು ೩. ಕಲ್ಪ ಸೂತ್ರಗಳು, ೪. ವ್ಯವಹಾರ ಸೂತ್ರಗಳು ಮತ್ತು ೫. ಜೀತಕಲ್ಪ ಸೂತ್ರಗಳು.

**ಆರು ಛೇದಗಳು** :- ಮಹಾನಿಶೀಥ ಬೃಹದ್ವಾಚನಾ ಸೂತ್ರಗಳು, ೨. ಮಹಾ ನಿಶೀಥಲಘುವಾಚನಾ ಸೂತ್ರಗಳು. ೩. ಮಧ್ಯಮ ವಾಚನಾ ಸೂತ್ರಗಳು, ೪. ಪಿಂಡ ನಿರುಕ್ತಿ ಸೂತ್ರಗಳು. ೫. ಓಘ ನಿರುಕ್ತಿ ಸೂತ್ರಗಳು, ೬. ಪರ್ಯೂಷಣಾ ಸೂತ್ರಗಳು.

**ದಶ ಪಯನ್ನಾ ಸೂತ್ರಗಳು :-** ೧. ಚತುಸರಣ ಸೂತ್ರಗಳು. ೨. ಪಚ್ಚಖಾಣ ಸೂತ್ರಗಳು, ೩. ತದುಲವೈಯಾಲಿಕಾ ಸೂತ್ರಗಳು, ೪. ಭಕ್ತಿ ಪರಿಜ್ಞಾನ ಸೂತ್ರಗಳು. ೫. ಮಹಾಪ್ರತ್ಯಾಖ್ಯಾನ ಸೂತ್ರಗಳು. ೬. ಚಂದಾವಿಜಯ ಸೂತ್ರಗಳು. ೭. ಗಣೀವಿಜಯ ಸೂತ್ರಗಳು. ೮. ಮರಣಸಮಾಧಿ ಸೂತ್ರಗಳು. ೯. ದೇವೇಂದ್ರಸ್ತಮನ ಸೂತ್ರಗಳು. ಮತ್ತು ೧೦. ಸಂಸಾರ ಸೂತ್ರಗಳು. ಮತ್ತು ನಂದೀ ಸೂತ್ರ - ಯೋಗೋದ್ಧಾರ ಸೂತ್ರಗಳನ್ನೂ ಕೂಡ ಪ್ರಾಮಾಣಿಕವೆಂದು ಅಂಗೀಕರಿಸುತ್ತಾರೆ.

**ಐದು ಪಂಚಾಂಗಗಳು:** - ೧. ಪೂರ್ವೋಕ್ತ ಗ್ರಂಥಗಳೆಲ್ಲದರ ಟೀಕೆ. ೨. ನಿರುಕ್ತಿ,೩. ಚೂರಣೀ. ೪. ಭಾಷ್ಯ . ಈ ನಾಲ್ಕು ಅವಯವಗಳು ಮತ್ತು ಮೂಲಗಳೆಲ್ಲವೂ ಸೇರಿ ಪಂಚಾಂಗವೆನಿಸುತ್ತವೆ.

(೧೨) ಇವರಲ್ಲಿ ಢೂಂಢಿಯಾಗಳು ಅವಯವಗಳನ್ನು ಅಂಗೀಕರಿಸುವುದಿಲ್ಲ. ಮತ್ತು, ಯಾವುದನ್ನು ಜೈನರು ಅಂಗೀಕರಿಸುತ್ತಾರೋ, ಅಂತಹ, ಇವುಗಳಿಂದ ಬೇರೆಯಾದ ಗ್ರಂಥಗಳಿವೆ. ಇವರ ಮತದ ಮೇಲೆ ವಿಶೇಷ ಸಮಾಲೋಚನೆಯನ್ನು ಹನ್ನೆರಡನೆಯ ಸಮುಲ್ಲಾಸದಲ್ಲಿ ನೋಡಿಕೊಳ್ಳಿರಿ.

(೧೩) ಜೈನರ ಗ್ರಂಥದಲ್ಲಿ ಲಕ್ಷಾಂತರ ಪುನರುಕ್ತ ದೋಷಗಳಿವೆ. ಮತ್ತು ತಮ್ಮ ಗ್ರಂಥ ಅನ್ಯಮತೀಯರ ಕೈಯಲ್ಲಿದ್ದರೆ, ಅಥವಾ ಮುದ್ರಿತವಾಗಿದ್ದರೆ, ಈ ಗ್ರಂಥವನ್ನು ಅಪ್ರಮಾಣವೆಂದು ಹೇಳುವ ಸ್ವಭಾವವೂ ಕೂಡ ಇವರಲ್ಲಿ ಹಲಕೆಲವರಲ್ಲಿರುತ್ತದೆ. ಅವರ ಈ ಮಾತು ಸುಳ್ಳಾಗಿದೆ. ಏಕೆಂದರೆ, ಯಾವುದನ್ನು ಕೆಲವರು ಒಪ್ಪುತ್ತಾರೋ, ಕೆಲವರು ಒಪ್ಪುವುದಿಲ್ಲವೋ ಅದು ಆ ಕಾರಣದಿಂದಲೇ ಜೈನಮತದಿಂದ ಹೊರಗಾಗಿ ಹೋಗಲಾರದು. ಅಹುದು; ಯಾವುದನ್ನು ಯಾವನೂ ಒಪ್ಪುವುದೇ ಇಲ್ಲವೋ, ಮತ್ತು ಎಂದೂ ಯಾವ ಜೈನರೂ ಒಪ್ಪಿಯೇ ಇಲ್ಲವೋ, ಅದು ಮಾತ್ರ ಅಗ್ರಾಹ್ಯವಾಗಬಲ್ಲದು. ಆದರೆ, ಯಾವುದನ್ನು ಯಾವ ಜೈನನೂ ಒಪ್ಪದಿರಬಹುದೋ, ಅಂತಹ ಯಾವ ಗ್ರಂಥವೂ ಇಲ್ಲ. ಆದುದರಿಂದ ಯಾವನು ಯಾವ ಗ್ರಂಥವನ್ನು ಒಪ್ಪುತ್ತಿರಬಹುದೋ, ಆ ಗ್ರಂಥದಲ್ಲಿನ ವಿಷಯಗಳ ಖಂಡನ- ಮಂಡನಗಳೂ ಕೂಡ, ಅವನ ಸಲುವಾಗಿಯೇ ಇರುತ್ತವೆ- ಎಂದು ತಿಳಿಯಲ್ಪಡುತ್ತದೆ. ಆದರೆ, ಯಾರು ಗ್ರಂಥವನ್ನು ತಿಳಿದೂ ಇರುತ್ತಾರೋ, ಅಂಗೀಕರಿಸಿಯೂ ಇರುತ್ತಾರೋ, ಆದರೂ ಕೂಡ ಸಭೆಯಲ್ಲಿ ಅಥವಾ ಸಂವಾದದಲ್ಲಿ ಪರಿವರ್ತಿತರಾಗಿ ಹೋಗುತ್ತಾರೋ, ಅಂತಹವರೂ ಕೂಡ ಅದೆಷ್ಟೋ ಜನರಿದ್ದಾರೆ. ಈ ಕಾರಣದಿಂದಲೇ ಜೈನರು ತಮ್ಮ ಗ್ರಂಥಗಳನ್ನು ಮುಚ್ಚಿಡುತ್ತಾರೆ ಮತ್ತು ಅನ್ಯಮತೀಯನಿಗೆ ಕೊಡುವುದೂ ಇಲ್ಲ; ಶ್ರವಣಮಾಡಿಸುವುದೂ ಇಲ್ಲ ಮತ್ತು ಓದಿಸುವುದೂ ಇಲ್ಲ. ಕಾರಣವೇನೆಂದರೆ, ಯಾವುವಕ್ಕೆ ಯಾವುದೇ ಉತ್ತರವನ್ನು ಜೈನರಲ್ಲಿ ಯಾವನೂ ಕೊಡಲಾರನೋ, ಅಂತಹ ಅಂತಹ ಅಸಂಭವವಾದ ಮಾತುಗಳು ಅವುಗಳಲ್ಲಿ ತುಂಬಿಕೊಂಡಿವೆ. ಸುಳ್ಳು ಮಾತನ್ನು ಬಿಟ್ಟುಬಿಡುವುದೇ ಉತ್ತರವಾಗಿರುತ್ತದೆ.

(೧೪) ಹದಿಮೂರನೆಯ ಸಮುಲ್ಲಾಸದಲ್ಲಿ ಕ್ರೈಸ್ತರ ಮತದ ವಿಷಯವನ್ನು ಬರೆದಿದ್ದೇನೆ. ಈ ಜನರು ಬೈಬಲನ್ನು ತಮ್ಮ ಧರ್ಮಪುಸ್ತಕವೆಂದು ಅಂಗೀಕರಿಸುತ್ತಾರೆ. ಇವರ ವಿಶೇಷ ಸಮಾಚಾರಗಳನ್ನು ಅದೇ ಹದಿಮೂರನೆಯ ಸಮುಲ್ಲಾಸದಲ್ಲಿ ನೋಡಿರಿ. ಮತ್ತು ಹದಿನಾಲ್ಕನೆಯ ಸಮುಲ್ಲಾಸದಲ್ಲಿ ಮುಸಲ್ಮಾನರ ಮತದ ವಿಷಯದಲ್ಲಿ ಬರೆದಿದ್ದೇವೆ. ಈ ಜನರು ಕುರಾನನ್ನು ತಮ್ಮ ಮತದ ಮೂಲ ಪುಸ್ತಕವೆಂದು ಒಪ್ಪಿ ಕೊಳ್ಳುತ್ತಾರೆ. ಇವರ ವಿಶೇಷ ವ್ಯವಹಾರವನ್ನು ಕೂಡ ಹದಿನಾಲ್ಕನೆಯ ಸಮುಲ್ಲಾಸದಲ್ಲಿ ನೋಡಿರಿ. ಮತ್ತು ಇದರ ನಂತರ ವೈದಿಕಮತದ ವಿಷಯದಲ್ಲಿ ಬರೆದಿದ್ದೇನೆ.

(೧೫) ಯಾವನಾದರೂ ಗ್ರಂಥಕರ್ತೃವಿನ ಅಭಿಪ್ರಾಯಕ್ಕೆ ವಿರುದ್ಧವಾದ ದೃಷ್ಟಿಕೋಣದಿಂದ ನೋಡುವನಾದರೆ, ಅವನಿಗೆ ಯಾವದೊಂದು ಅಭಿಪ್ರಾಯವೂ ವಿದಿತವಾಗುವುದಿಲ್ಲ. ಏಕೆಂದರೆ ವಾಕ್ಯಾರ್ಥಬೋಧಕ್ಕೆ ಆಕಾಂಕ್ಷೆ ಯೋಗ್ಯತೆ ಆಸತ್ತಿ ಮತ್ತು ತಾತ್ಪರ್ಯ ಎಂಬ ನಾಲ್ಕು ಕಾರಣಗಳಿರುತ್ತವೆ. ಯಾವ ಪುರುಷನು ಯಾವಾಗ ಈ ನಾಲ್ಕು ಅಂಶಗಳ ಮೇಲೆಯೂ ಗಮನವಿಟ್ಟು ನೋಡುತ್ತಾನೋ, ಅವನಿಗೆ ಆಗ ಗ್ರಂಥದ ಅಭಿಪ್ರಾಯ ಯಥಾ ಯೋಗ್ಯವಾಗಿ ವಿದಿತವಾಗುತ್ತದೆ.

ಯಾವುದಾದರೂ ವಿಷಯದ ಮೇಲೆ ಹೇಳುವವನ ಮತ್ತು ವಾಕ್ಯದಲ್ಲಿನ ಪದಗಳ "ಆಕಾಂಕ್ಷೆ"[1] ಇರುತ್ತದೆ. ಯಾವುದರಿಂದ ಏನೂ ಆಗಬಲ್ಲದೋ, ಅದು "ಯೋಗ್ಯತೆ"[2] ಎನಿಸುತ್ತದೆ. ಉದಾಹರಣೆಗೆ :- ನೀರಿನಲ್ಲಿರುವ ಯೋಗ್ಯತೆ ನೆನೆಯಿಸುವುದು ಅಥವಾ ನೀರನ್ನು

---

೧. ಲೇಖಕನು ಶಬ್ದ ಪ್ರಯೋಗವನ್ನು ಯಾವ ಭಾವನಾ ಸೂಚಕ ಉದ್ದೇಶ್ಯದಿಂದ ಮಾಡುತ್ತಾನೋ ಅದು"ಆಕಾಂಕ್ಷೆ".

೨. ಶಬ್ದಕ್ಕೆ ಯಾವ ಭಾವನಾಸೂಚಕ ಸಾಮರ್ಥ್ಯವಿದೆಯೋ, ಅದು "ಯೋಗ್ಯತೆ".

ಹಾಯಿಸುವುದು. ಯಾವ ಪದದೊಂದಿಗೆ ಯಾವುದರ ಸಂಬಂಧವಿದೆಯೋ, ಅದರ ಬಳಿಯೇ ಆ ಪದವನ್ನು ಹೇಳುವುದು ಅಥವಾ ಬರೆಯುವುದು "ಆಸತ್ತಿ" [3] ಎನಿಸುತ್ತದೆ. ಯಾವುದರ ಸಲುವಾಗಿ ವಕ್ತೃವು ಶಬ್ದೋಚ್ಚಾರಣೆಯನ್ನು ಮಾಡಿದ್ದಾನೋ, ಅಥವಾ ಬರೆದಿದ್ದಾನೋ, ಅದರೊಂದಿಗೆಯೇ ಆ ವಚನವನ್ನು ಅಥವಾ ಲೇಖನವನ್ನು ಅನ್ವಯಿಸುವುದು "ತಾತ್ಪರ್ಯ"[4] ವೆನಿಸುತ್ತದೆ.

(೧೬) ಯಾರು ವಕ್ತೃವಿನ ಅಭಿಪ್ರಾಯಕ್ಕೆ ವಿರುದ್ಧವಾದ ಕಲ್ಪನೆಯನ್ನು ಮಾಡುವ ಪರಿಪಾಟಿಯನ್ನಿಟ್ಟುಕೊಂಡಿರುತ್ತಾರೋ, ಅಂತಹ ಹಠಗಳೂ, ದುರಾಗ್ರಹಿಗಳೂ ಆದ ಮಾನವರೂ ಬಹಳ ಮಂದಿಯಿರುತ್ತಾರೆ. ವಿಶೇಷತಃ ಮತವಾದಿಗಳಾದ ಜನರು, ಏಕೆಂದರೆ, ಮತದ ಆಗ್ರಹದಿಂದ ಅವರ ಬುದ್ಧಿ ಅಂಧಕಾರದಲ್ಲಿ ಸಿಕ್ಕಿಕೊಂಡು, ನಾಶವಾಗಿ ಹೋಗುತ್ತದೆ. ಆದುದರಿಂದ, ನಾನು ಹೇಗೆ ಪುರಾಣಗಳನ್ನೂ, ಜೈನರ ಗ್ರಂಥಗಳನ್ನೂ, ಬೈಬಲನ್ನೂ ಮತ್ತು ಕುರಾನನ್ನೂ ಮೊದಲೇ ವಕ್ರದೃಷ್ಟಿಯಿಂದ ನೋಡದೆ, ಅವುಗಳಿಂದ ಗುಣಗಳ ಸ್ವೀಕಾರವನ್ನೂ, ದೋಷಗಳ ತ್ಯಾಗವನ್ನೂ ಮತ್ತು ಅನ್ಯಮಾನವ ಜಾತಿಯ ಉತ್ಕರ್ಷಕ್ಕಾಗಿ ಪ್ರಯತ್ನವನ್ನೂ ಮಾಡುತ್ತೇನೋ, ಹಾಗೆ ಎಲ್ಲರೂ ಮಾಡುವುದು ಯೋಗ್ಯವಾಗಿರುತ್ತದೆ.

(೧೭) ಯಾವವನ್ನು ನೋಡಿ ಮಾನವರು ಸತ್ಯಾಸತ್ಯ ಮತಗಳ ನಿರ್ಣಯವನ್ನು ಮಾಡಲು ಸಮರ್ಥರಾಗುವರೋ, ಮತ್ತು ಸತ್ಯದ ಸ್ವೀಕಾರವನ್ನೂ, ಅಸತ್ಯದ ಪರಿತ್ಯಾಗವನ್ನೂ ಮಾಡಲು ಮತ್ತು ಮಾಡಿಸಲು ಶಕ್ತರಾಗುವರೋ, ಅಂತಹ ಸ್ವಲ್ಪ- ಸ್ವಲ್ಪ ದೋಷಗಳನ್ನು ಮಾತ್ರ ಈ ಮತಗಳ ಬಗೆಗೆ ಪ್ರಕಾಶ ಪಡಿಸಿದ್ದೇನೆ. ಏಕೆಂದರೆ, ಒಂದೇ ಆದ ಮಾನವ ಜಾತಿಯಲ್ಲಿ ದುಷ್ಪ್ರೇರಣೆಯನ್ನು ಮಾಡಿ, ವಿರುದ್ಧವಾದ ಬುದ್ಧಿಯನ್ನು ಹುಟ್ಟಿಸಿ, ಒಬ್ಬರನ್ನು ಮತ್ತೊಬ್ಬರ ಶತ್ರುವನ್ನಾಗಿ ಮಾಡಿ, ಹೋರಾಡಿಸಿ ನಾಶ ಮಾಡುವುದು ವಿದ್ವಾಂಸರ ಸ್ವಭಾವಕ್ಕೆ ಹೊರಗಿನದಾಗಿರುತ್ತದೆ. ಈ ಗ್ರಂಥವನ್ನು ನೋಡಿ ವಿದ್ವಾಂಸರಾದ ಜನರು ಯಥಾಯೋಗ್ಯವಾಗಿ ಇದರ ಅಭಿಪ್ರಾಯವನ್ನು ತಿಳಿದುಕೊಳ್ಳುವರು. ಇದರಿಂದ ನಾನು ನನ್ನ ಪರಿಶ್ರಮ ಸಫಲವಾಯಿತೆಂದು ತಿಳಿದುಕೊಳ್ಳುತ್ತೇನೆ ಮತ್ತು ನನ್ನ ಅಭಿಪ್ರಾಯವನ್ನು ಸಜ್ಜನರೆಲ್ಲರ ಮುಂದೆಯೂ ಮಂಡಿಸುತ್ತೇನೆ. ಇದನ್ನು ನೋಡಿ, ಅನ್ಯರಿಗೆ ತೋರಿಸಿ ನನ್ನ ಪ್ರಯತ್ನವನ್ನು ಸಫಲವಾಗಿ ಮಾಡಲಿ ಮತ್ತು ಇದೇ ರೀತಿ ಪಕ್ಷಪಾತಮಾಡದೆ ಸತ್ಯಾರ್ಥದ ಪ್ರಕಾಶವನ್ನು ಮಾಡುವುದು ನನ್ನ ಹಾಗೂ ಸಮಸ್ತ ಮಹಾಶಯರುಗಳು ಮುಖ್ಯವಾದ ಕರ್ತವ್ಯಕರ್ಮವಾಗಿದೆ.

(೧೮) ಸರ್ವಾತ್ಮನೂ, ಸರ್ವಾಂತರ್ಯಾಮಿಯೂ ಸಚ್ಚಿದಾನಂದನೂ ಆದ ಪರಮಾತ್ಮನು ತನ್ನ ಕೃಪೆಯಿಂದ ಈ ಆಶಯವನ್ನು ವಿಸ್ತೃತವಾಗಿ ಮತ್ತು ಚಿರಸ್ಥಾಯಿಯಾಗಿ ಮಾಡಲಿ.

ಅಲಮತಿವಿಸ್ತರೇಣ ಬುದ್ಧಿಮದ್ವರಶಿರೋಮಣಿಷು.

ಇತಿ ಭೂಮಿಕಾ

ಸ್ಥಾನ:- ಮಹಾರಾಣಾರವರ ಉದಯಪುರ
ಭಾದ್ರಪದ ಶುಕ್ಲಪಕ್ಷ ವಿಕ್ರಮ ಸಂವತ್. ೧೯೩೯

(ಸ್ವಾಮೀ) ದಯಾನಂದ ಸರಸ್ವತೀ.

---

೩. ಭಾವನೆ ಸ್ಫುಟವಾಗಿ ಅರಿವಾಗುವಂತೆ ಶಬ್ದಗಳನ್ನು ತತ್ತತ್ಸಾಮೀಪ್ಯದಲ್ಲಿಡುವುದು "ಆಸತ್ತಿ" .

೪. ಲೇಖಕ ಮಂಡಿಸಲು ಬಯಸುವ ಅಭಿಪ್ರಾಯವೇ "ತಾತ್ಪರ್ಯ"

# ಯೋಗೀಶ್ವರ ಶ್ರೀ॥ ಅರವಿಂದ ಘೋಷರು ಕಂಡ ದಯಾನಂದರ ವ್ಯಕ್ತಿತ್ವ.

"ಯಾವುದೇ ನಿಶ್ಚಯಕ್ಕೂ ಬರಲಾಗದೆ ದಿಗ್ಭ್ರಾಂತವಾದ ವಸ್ತುಸ್ಥಿತಿಯ ಆತ್ಮನೊಳಕ್ಕೆ, ಯಾವುದೇ ಕ್ರಮವು ಇಲ್ಲದೆ ತಮ್ಮನ್ನು ತಾನೇ ನುಗ್ಗಿಸಿ ಕೊಳ್ಳಲಿಲ್ಲ; ಆದರೆ- ಮಾನವರ ಹಾಗೂ ವಸ್ತುಗಳ ಮೇಲೆ ತನ್ನ ವ್ಯಕ್ತಿತ್ವವನ್ನು ಎಂದಿಗೂ ಅಳಿಸಲಾಗದಂತೆ, ಕಂಚಿನ ಪ್ರತಿಮೆಯಂತೆ ಸುಸ್ಪಷ್ಟವಾಗಿ ಒತ್ತಿ, ಅಳಿದರೂ ಕೂಡ ಸದಾ ಕಾಲಕ್ಕೂ ಉಳಿದುಕೊಂಡರು ಮಹರ್ಷಿ ದಯಾನಂದರು. ಭಗವಂತನ ನಿರ್ಮಾಣಶಾಲೆಯಲ್ಲಿನ ಈ ಅತಿಮಹತ್ತ್ವದ ವ್ಯಕ್ತಿಯ ಬಗೆಗೆ ನಾನು ಆಲೋಚಿಸಿದಾಗ, ನಿರಂತರ ಸಂಘರ್ಷದ, ಗುರಿತಪ್ಪದ ಕಾರ್ಯದ ಮತ್ತು ವಿಜಯದ ಹಾಗೂ ಜಯಶಾಲೀ ಕೃತಿಯ ಚೇತೋಹಾರೀ ಪ್ರತಿಮೆಗಳೇ ಗುಂಪುಗುಂಪಾಗಿ ನನ್ನ ಮಾನಸನೇತ್ರದ ಮುಂದೆ ಸುಳಿಯುತ್ತವೆ. ಇಲ್ಲಿ "ಪ್ರಕಾಶದ ಸೈನಿಕನೇ ಇದ್ದನು: ಭಗವಂತನ ಜಗತ್ತಿನಲ್ಲಿ ಮಾನವರಿಗೆ ಮತ್ತು ಸಂಸ್ಥೆಗಳಿಗೆ ರೂಪಕೊಡುವ ಒಬ್ಬ ಶಿಲ್ಪಿಯಿದ್ದನು; ಪ್ರಕೃತಿಯು ಆತ್ಮನ ಮುಂದೊಡ್ಡುವ ಕಷ್ಟ-ಕಾರ್ಪಣ್ಯಗಳನ್ನು ಧೀರ-ವೀರನಾಗಿ ಹೊತ್ತಿಕ್ಕಿ ಜಯಗಳಿಸುವ ಅಜೇಯವ್ಯಕ್ತಿತ್ವವೇ ದಯಾನಂದರ ರೂಪದಲ್ಲಿ ಎದುರಿಗಿದ್ದಿತು" - ಎಂದು ನನಗೆ ನಾನೇ ಹೇಳಿಕೊಳ್ಳುತ್ತೇನೆ.

ಬೇರೆ ಎಲ್ಲವನ್ನೂ ಮರೆತರೂ ಕೂಡ, ಒಂದು ನಿರಂತರ ಸತ್ಯವನ್ನು ಮಾತ್ರ, ಚಿರಂತನ ತಥ್ಯವನ್ನು ಮಾತ್ರ ನಾನೆಂದಿಗೂ ಮರೆಯಲಾರೆ. ಮತೀಯ ಭ್ರಾಂತಿಗೆ ಬಲಿ ಬಿದ್ದ ಭಾಷ್ಯಕಾರರ ತಿರುಹು-ಮುರುಹು ವಿವರಣಗಳ ಕಾರಣದಿಂದ ಕಾಡಾಡಿಗಳ ಹಾಡುಗಳೆಂದು ಹೇಳಲ್ಪಡುತ್ತಿದ್ದ, ಆದರೆ ವಸ್ತುತಃ ಈಶ್ವರೀಯ ಜ್ಞಾನಭಂಡಾರಗಳಾದ ವೇದಗಳ ನೈಜಾರ್ಥದ ಬೀಗದ ಕೈಯನ್ನು ಜನತೆಯ ಕೈಗಿತ್ತು ಹೋದ ಮಹಾಮಹಿಮರು ಮಹರ್ಷಿ ದಯಾನಂದರು."

# ವೇದದ ಕರೆ

ಜ್ಯೋತಿರ್ವೃಣೀತ ತಮಸೋ ವಿಜಾನನ್
ಆರೇ ಸ್ಯಾಮ ದುರಿತಾದಭೀಕೇ ।
ಇಮಾ ಗಿರಃ ಸೋಮಪಾಃ ಸೋಮವೃದ್ಧ
ಜುಷಸ್ವೇಂದ್ರ ಪುರುತಮಸ್ಯ ಕಾರೋಃ ॥

(ಋಗ್ವೇದ:- ೩-೩೯-೭)

"**(ಸೋಮಪಾಃ)** ಭಗವದಾನಂದರಸವನ್ನು ಸವಿಯುವ, **(ಸೋಮವೃದ್ಧ )** ಶಾಂತಿಯಿಂದಲೇ ಪ್ರವರ್ಧಮಾನನಾಗುವ, **(ಇಂದ್ರ)** ಇಂದ್ರಿಯವಾನ್ ಜೀವ! ಮಾನವಯೋನಿಯಲ್ಲಿರುವ ವಿವೇಕವಾನ್ ಆತ್ಮನ್! **(ಪುರುತಮಸ್ಯ ಕಾರೋಃ)** ಅಣು - ಅಣುವಿನಲ್ಲಿಯೂ, ಕಣಕಣದಲ್ಲಿಯೂ ವ್ಯಾಪಕನಾಗಿರುವ ಜಗತ್ಕರ್ತೃವಿನ, **(ಇಮಾಃ ಗಿರಃ)** ಈ ದೈವೀ ವಾಣಿಗಳನ್ನು **(ಜುಷಸ್ವ)** ಪ್ರೀತಿಯಿಂದ ಸ್ವೀಕರಿಸು. ಮಾನವನು, **(ವಿಜಾನನ್)** ವಿಶೇಷ ಜ್ಞಾನ ಪಡೆಯುತ್ತಾ, **(ತಮಸಃ)** ಅಜ್ಞಾನಾಂಧಕಾರದಿಂದ ದೂರನಾಗಿ, **(ಜ್ಯೋತಿಃ ವೃಣೀತ)** ಜ್ಞಾನ ಜ್ಯೋತಿಯನ್ನು ಆರಿಸಿಕೊಳ್ಳಬೇಕು. ನಾವೆಲ್ಲರೂ, **(ದುರಿತಾತ್ ಆರೇ)** ದುರ್ನಡೆಯಿಂದ ದೂರಸರಿದು, **(ಅಭೀಕೇ)** ಭಯರಹಿತ ಸ್ಥಿತಿಯಲ್ಲಿ **(ಸ್ಯಾಮ)** ಇರೋಣ".